

**ಶೇಷಾದ್ರಿಪುರಂ ಕಾಲೇಜು:** ಪ್ರಥಮ ಪದವಿ ತರಗತಿಗಳ ಉದ್ಘಾಟನೆ: ವಿಧಾನ ಪರಿಷತ್ ಸದಸ್ಯ ಡಾ. ದೊಡ್ಡರಂಗೇಗೌಡ, ಅತಿಥಿ: ವೂಡೇ ಪಿ. ಕೃಷ್ಣ, ಅಧ್ಯಕ್ಷತೆ: ದತ್ತಿ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ. ಸ್ಥಳ: ದತ್ತಿ ಸಭಾಂಗಣ, ಶೇಷಾದ್ರಿಪುರ. ಬೆಳಗ್ಗೆ 9.30.

**ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ ಮತ್ತು ಮ್ಯಾನೇಜ್‌ಮೆಂಟ್:** ಬಿ.ಕಾಂ ಮತ್ತು ಪ್ರಥಮ ಬಿಬಿಎಂ ತರಗತಿಗಳ ಉದ್ಘಾಟನೆ. ಅತಿಥಿ: ಎಂ.ಪಿ. ಬಿರ್ಲಾ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್ ಮೆಂಟ್‌ನ ಎಸ್. ಹೇಮಂತ್ ಕುಮಾರ್, ಅಧ್ಯಕ್ಷತೆ: ಎನ್.ಆರ್. ಪಂಡಿತಾರಾಧ್ಯ. ಸ್ಥಳ: ಕಾಲೇಜು ಆವರಣ, ಬಾಲಕಿಯರ ಶಾಲೆ ರಸ್ತೆ. ಬೆಳಗ್ಗೆ 10.

'ಪ್ರಜಾಪ್ರಗತಿ' ಕನ್ನಡ ದಿನಪತ್ರಿಕೆ

ದಿನಾಂಕ 26 ಜುಲೈ 2008 ಶನಿವಾರ

## ಜಿಲ್ಲೆಯಲ್ಲಿಂದು

- ಬೆಳಗ್ಗೆ 10 ಗಂಟೆಗೆ ಕೊರಟಗೆರೆ ತಾಲ್ಲೂಕು ಇರಕಸಂದ್ರ ಕಾಲೋನಿಯ ಸರ್ಕಾರಿ ಪ.ಪೂ. ಕಾಲೇಜಿನಲ್ಲಿ ಉಚಿತ ಪಠ್ಯ ಪುಸ್ತಕ ಲೇಖನ ಸಾಮಗ್ರಿಗಳು ಹಾಗೂ ನೋಟ್ ಪುಸ್ತಕಗಳ ವಿತರಣಾ ಸಮಾರಂಭ. ಉದ್ಘಾಟನೆ: ಜಿಲ್ಲಾ ಪ.ಪೂ. ಶಿಕ್ಷಣ ಇಲಾಖೆ ಉಪ ನಿರ್ದೇಶಕ ಬಿ.ಎಂ. ಮಹದೇವಮೂರ್ತಿ. ಅಧ್ಯಕ್ಷತೆ: ಶಾಸಕ ಡಾ.ಜಿ. ಪರಮೇಶ್ವರ್, ನೋಟ್ ಪುಸ್ತಕಗಳ ವಿತರಣೆ: ಮಧುಗಿರಿ ಸಾ.ಶಿ.ಇ ಉಪನಿರ್ದೇಶಕ ವೆಂಕಟೇಶಪ್ಪ.
- ಬೆಳಗ್ಗೆ 11 ಗಂಟೆಗೆ ಶಿರಾಪಟ್ಟಣದ ಸರ್ಕಾರಿ ಪ.ಪೂ. ಕಾಲೇಜಿನ ಆವರಣದಲ್ಲಿ ಗಾಂಧೀ ವಿಚಾರ ಪ್ರಚಾರ ಸಮಾವೇಶ. ಉದ್ಘಾಟನೆ: ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಹೆಚ್.ಎಸ್.ದೊರೆಸ್ವಾಮಿ, ಅಧ್ಯಕ್ಷತೆ: ಶಾಸಕ ಟಿ.ಬಿ.ಜಯಚಂದ್ರ, ಮುಖ್ಯ ಅತಿಥಿ: ಶಿಕ್ಷಣ ತಜ್ಞ ವೂಡೇ ಪಿ.ಕೃಷ್ಣ.
- ಮಧ್ಯಾಹ್ನ 3-30 ಕ್ಕೆ ಗುಬ್ಬಿ ತಾಲ್ಲೂಕು ನಿಟ್ಟೂರು ಹೋಬಳಿ ಎನ್. ನಂದಿಹಳ್ಳಿ ಗ್ರಾಮದಲ್ಲಿ ಕಾನೂನು ಅರಿವು ಮತ್ತು ನೆರವು ಕಾರ್ಯಕ್ರಮ ಹಾಗೂ ಉಚಿತವಾಗಿ ಗ್ರಾಮದ ಶಾಲಾ ಮಕ್ಕಳಿಗೆ ಸಮವಸ್ತ್ರ ನೋಟ್ ಬುಕ್, ತಟ್ಟೆ ಲೋಟ ವಿತರಣಾ ಸಮಾರಂಭ. ಉದ್ಘಾಟನೆ: ಎಸ್.ಬಿ.ಎಂ. ವಲಯ 5ರ ಸಹಾಯಕ ಪ್ರಧಾನ ವ್ಯವಸ್ಥಾಪಕ ಸಿ.ಜಯಣ್ಣ, ಅಧ್ಯಕ್ಷತೆ: ಜಿಲ್ಲಾ ಪ್ರಧಾನ ಮತ್ತು ಸತ್ರ ನ್ಯಾಯಾಧೀಶ ಪಿ.ಕೃಷ್ಣಭಟ್

ಸಂಜೆವಾಣಿ

ಶನಿವಾರ 26 ಜುಲೈ 2008

# ಕೇಂದ್ರ ಸಮಿತಿ ಸದಸ್ಯರಾಗಿ ವೂಡೇ ಕೃಷ್ಣ



ಬೆಂಗಳೂರು, ಜು. ೨೫- ರಾಜ್ಯ ರೆಡ್‌ಕ್ರಾಸ್ ಸಂಸ್ಥೆಯ ಉಪಾಧ್ಯಕ್ಷ ವೂಡೇ ಪಿ. ಕೃಷ್ಣರವರು ಭಾರತೀಯ ಕ್ಷಯರೋಗ ಸಂಸ್ಥೆಯ ಕೇಂದ್ರ ಸಮಿತಿಯ ಸದಸ್ಯರಾಗಿ ನೇಮಕಗೊಂಡಿದ್ದಾರೆ.

ನವದೆಹಲಿಯಲ್ಲಿ ಕೇಂದ್ರ ಆರೋಗ್ಯ ಸಚಿವ ಡಾ. ಅನ್ಬುಮಣಿ ರಾಮದಾಸ್ ಅವರ ಅಧ್ಯಕ್ಷತೆಯಲ್ಲಿ ನಡೆದ ರೆಡ್‌ಕ್ರಾಸ್ ರಾಷ್ಟ್ರೀಯ ಕಾರ್ಯಕಾರಿಣಿ ಸಭೆಯು ಈ ನೇಮಕ ಮಾಡಿದೆ ಎಂದು ಪ್ರಕಟಣೆ ತಿಳಿಸಿದೆ.

24-7-2008

**ಸಂಯುಕ್ತ ಕರ್ನಾಟಕ, ಬೆಂಗಳೂರು**

6-00 ಕುಮಾರಪಾರ್ಕ್ ಪೂರ್ವ, ಗಾಂಧಿ ಭವನ. ಸರ್ವೋದಯ ಸಾಹಿತ್ಯ ಮತ್ತು ರಾಷ್ಟ್ರೀಯ. ಸಾಹಿತ್ಯದ ಪುಸ್ತಕ ಮಾರಾಟ ಮತ್ತು ಪುಸ್ತಕ ಪ್ರದರ್ಶನದ ಸಮಾರೋಪ ಸಮಾರಂಭ. ಸಮಾರೋಪ ಭಾಷಣ: ಪ್ರೊ. ಓ. ಅನಂತರಾಮಯ್ಯ, ಅತಿಥಿ: ಡಾ. ಹೊ. ಶ್ರೀನಿವಾಸಯ್ಯ, ಅಧ್ಯಕ್ಷತೆ: ವೂಡೆ ಪಿ. ಕೃಷ್ಣ.

ಗುರುವಾರ 24 ಜುಲೈ 2008 **ಉದಯವಾಣಿ**

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಗಾಂಧೀ ಶಾಂತಿ ಪ್ರತಿಷ್ಠಾನ: ಗಾಂಧೀ ಭವನ, ಕುಮಾರಪಾರ್ಕ್ ಪೂರ್ವ. ಗಾಂಧೀ ಸಾಹಿತ್ಯ, ಸರ್ವೋದಯ ಸಾಹಿತ್ಯ, ರಾಷ್ಟ್ರೀಯ ಸಾಹಿತ್ಯದ ಪುಸ್ತಕ ಪ್ರದರ್ಶನ ಹಾಗೂ ಮಾರಾಟ ಸಮಾರೋಪ. ಅತಿಥಿ: ತುಮಕೂರು ವಿಶ್ವವಿದ್ಯಾಲಯ ಕುಲಪತಿ ಪ್ರೊ| ಓ. ಅನಂತರಾಮಯ್ಯ, ಗಾಂಧೀ ಶಾಂತಿ ಪ್ರತಿಷ್ಠಾನ ಅಧ್ಯಕ್ಷ ವೂಡೇ.ಪಿ. ಕೃಷ್ಣ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ| ಹೋ. ಶ್ರೀನಿವಾಸಯ್ಯ. ಸಂಜೆ 6.

**ಪ್ರಜಾವಾಣಿ**

ಗುರುವಾರ 24ನೇ ಜುಲೈ 2008

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಗಾಂಧಿ ಭವನ, ಕುಮಾರಪಾರ್ಕ್ ಪೂರ್ವ. ಗಾಂಧಿ ಸಾಹಿತ್ಯ, ಸರ್ವೋದಯ ಸಾಹಿತ್ಯ ಹಾಗೂ ರಾಷ್ಟ್ರೀಯ ಸಾಹಿತ್ಯದ ಪುಸ್ತಕ ಪ್ರದರ್ಶನ ಹಾಗೂ ಮಾರಾಟ ಮೇಳದ ಸಮಾರೋಪ ಸಮಾರಂಭ. ಅತಿಥಿಗಳು- ತುಮಕೂರು ವಿಶ್ವವಿದ್ಯಾಲಯದ ಕುಲಪತಿ ಪ್ರೊ.ಓ. ಅನಂತರಾಮಯ್ಯ, ಸ್ಮಾರಕ ನಿಧಿಯ ಅಧ್ಯಕ್ಷ ಡಾ.ಹೊ. ಶ್ರೀನಿವಾಸಯ್ಯ, ಅಧ್ಯಕ್ಷತೆ- ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೇ ಪಿ. ಕೃಷ್ಣ. ಸಂಜೆ 6.

**DECCAN HERALD**

Thursday, July 24, 2008

**Karnataka Gandhi Prathishtana:** Valedictory of exhibition and sale of Gandhian, Sarvodaya and National literature, Tumkur University Vice Chancellor O Anantharamaiah, Gandhi Peace Foundation Chairman Wooday P Krishna participate, Gandhi Bhavan, Kumara Park East, 6 pm.

ಕನ್ನಡಪ್ರಭ, ಗುರುವಾರ, 24 ಜುಲೈ 2008

■ ಗಾಂಧಿ ಶಾಂತಿ ಪ್ರತಿಷ್ಠಾನ: ಸರ್ವೋದಯ ಸಾಹಿತ್ಯ ಸಮಾರೋಪ, ಅಧ್ಯಕ್ಷತೆ- ವೂಡೆ ಪಿ. ಕೃಷ್ಣ, ಅತಿಥಿ- ಡಾ| ಹೊ. ಶ್ರೀನಿವಾಸಯ್ಯ, ಗಾಂಧಿ ಭವನ, ಕುಮಾರಪಾರ್ಕ್ ಪೂರ್ವ, ಸಂಜೆ 6.

ಜುಲೈ 24, 2008 ಉದಯವಾಣಿ




ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಪದವಿ ಪೂರ್ವ ಕಾಲೇಜು ಉಪನ್ಯಾಸಕರಿಗಾಗಿ ಏರ್ಪಡಿಸಿದ್ದ ಗುಣಮಟ್ಟ ಸಮೃದ್ಧಿಗೊಳಿಸುವ ವಿಶೇಷ ಕಾರ್ಯಕ್ರಮ'ವನ್ನು ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಮಾಜಿ ಕುಲಪತಿ ಡಾ| ಎಸ್. ಬಸಲಯ್ಯ ಅವರು ಉದ್ಘಾಟಿಸಿದರು. ಅಧ್ಯಕ್ಷ ಎನ್. ಆರ್. ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ಪ್ರೊ| ಪಿ. ಕೃಷ್ಣ, ಕರ್ನಾಟಕ ಖಾಸಗಿ ಸ್ನಾತಕೋತ್ತರ ಕಾಲೇಜುಗಳ ಸಂಘದ ಅಧ್ಯಕ್ಷ ಸಿ. ಎನ್. ಕೃಷ್ಣಾರೆಡ್ಡಿ, ಸಂಚಾಲಕಿ ಡಾ| ಎಲ್. ಉಮಾದೇವಿ, ಸಂಸ್ಥೆಯ ಟಿ. ಎಸ್. ಹಂಜಾರಪ್ಪ, ಎ. ಆರ್. ಶ್ರೀನಿವಾಸಯ್ಯ ಉಪಸ್ಥಿತರಿದ್ದರು.

ಈ ಸಂಜೆ
ಬುಧವಾರ 23 ಜುಲೈ 2008



ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಪಿಯು ಕಾಲೇಜು ಉಪನ್ಯಾಸಕರಿಗೆ ಹಮ್ಮಿಕೊಂಡಿದ್ದ ವಿಶೇಷ ಕಾರ್ಯಕ್ರಮವನ್ನು ಕೃಷಿ ವಿವಿ ವಿಶ್ರಾಂತ ಕುಲಪತಿ ಡಾ.ಎಸ್.ಬಿಸಲಯ್ಯ ಉದ್ಘಾಟಿಸಿದರು. ಎನ್.ಆರ್.ಪಂಡಿತಾರಾಧ್ಯ, ವೂಡೇ ಪಿ.ಕೃಷ್ಣ, ಸಿ.ಎನ್.ಕೃಷ್ಣಾರೆಡ್ಡಿ ಹಾಜರಿದ್ದರು.

ಸೋಮವಾರ 21 ಜುಲೈ 2008 ಉದಯವಾಣಿ

# ಗಾಂಧೀ ವಿಚಾರಧಾರೆ ಇಂದಿಗೂ ಪ್ರಸ್ತುತ: ಠಾಕೂರ್

ಬೆಂಗಳೂರು, ಜು. 20: ಮಹಾತ್ಮ ಗಾಂಧೀಜಿ ಅವರ ವಿಚಾರಗಳನ್ನು ಬದಲಾಗಿರುವ ಇಂದಿನ ಕಾಲಮಾನಕ್ಕೆ ಅನುಗುಣವಾಗಿ ವಿಶ್ಲೇಷಿಸುವ ಅಗತ್ಯವಿದೆ ಎಂದು ರಾಜ್ಯಪಾಲ ರಾಮೇಶ್ವರ ಠಾಕೂರ್ ಪ್ರತಿಪಾದಿಸಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಗಾಂಧೀ ಶಾಂತಿ ಪ್ರತಿಷ್ಠಾನ ಜೊತೆಗೂಡಿ ನಗರದಲ್ಲಿ ಆಯೋಜಿಸಿರುವ ಎಂಟುದಿನಗಳ ಗಾಂಧೀ ಸಾಹಿತ್ಯ, ಸರ್ವೋದಯ ಸಾಹಿತ್ಯ ಮತ್ತು ರಾಷ್ಟ್ರೀಯ ಸಾಹಿತ್ಯದ ಪುಸ್ತಕ ಪ್ರದರ್ಶನ ಹಾಗೂ ಮಾರಾಟಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು.

ಗಾಂಧೀಜಿ ಅವರ ವಿಚಾರಧಾರೆಗಳು ಇಂದಿಗೂ ಪ್ರಸ್ತುತವಾಗಿವೆ. ಯುವಕರಿಗೆ ಗಾಂಧೀಜಿ ವಿಚಾರಗಳನ್ನು ತಿಳಿಸುವ ಏಕೈಕ ಉದ್ದೇಶದಿಂದ ಅವುಗಳನ್ನು ಇಂದಿನ ಕಾಲಮಾನಕ್ಕೆ ಅನುಗುಣವಾಗಿ ವಿಶ್ಲೇಷಿಸುವ ಅನಿವಾರ್ಯತೆ ಇದೆ ಎಂದು ಹೇಳಿದರು.

ಬೌದ್ಧಿಕ ಆಸ್ತಿ ಹಕ್ಕು ರೂಪದಲ್ಲಿ ಗಾಂಧೀಜಿ ಅವರ ವಿಚಾರವಾದ ಸ್ವದೇಶಿ ಆಂದೋಲನ ಸಹ ಹೊಸ ಅರ್ಥವನ್ನು ದೇಶದಲ್ಲಿ ಕಂಡುಕೊಳ್ಳುತ್ತಿದೆ. ಗ್ರಾಮ ಸ್ವರಾಜ್ ಕಲ್ಪನೆ ಸಹ ಪಂಚಾಯತ್ ರಾಜ್ ವ್ಯವಸ್ಥೆ ಮೂಲಕ ಇಡೀ ದೇಶದಲ್ಲಿ ಅನುಷ್ಠಾನಗೊಳ್ಳುತ್ತಿದೆ ಎಂದು ಹೇಳಿದರು.

**ಸಮಯೋಚಿತ:** ಸ್ವಾತಂತ್ರ್ಯಕ್ಕಾಗಿ ಮಹಾತ್ಮಗಾಂಧೀಜಿ ಸೇರಿದಂತೆ ಅನೇಕ ಹಿರಿಯರು ಮಾಡಿರುವ ಬಲಿದಾನದ ವಿಚಾರ ಮರೆಯಾಗುತ್ತಿರುವ ಈ ಸಂದರ್ಭದಲ್ಲಿ ಯುವಜನರಿಗೆ ಗಾಂಧೀಜಿ ವಿಚಾರಧಾರೆಯ ಅರಿವು ಮೂಡಿಸುವ ಉದ್ದೇಶದಿಂದ ಆಯೋಜಿಸಿರುವ ಪುಸ್ತಕ ಪ್ರದರ್ಶನ ನಿಜವಾಗಿಯೂ ಸಮಯೋಚಿತವಾದ ನಡೆ ಎಂದು ಹೇಳಿದರು.

ಮಾರುಕಟ್ಟೆಯಲ್ಲಿ ಲಭ್ಯವಿಲ್ಲದ್ದ ಅಪರೂಪದ ಪುಸ್ತಕಗಳ ಪ್ರದರ್ಶನವನ್ನು ಇಲ್ಲಿ ಸಂಘಟಿಸಿರುವುದು ನಿಜವಾಗಿಯೂ ಸಂತಸದ ವಿಚಾರ ಎಂದ ರಾಜ್ಯಪಾಲರು ಗಾಂಧೀಜಿ ವಿಚಾರಗಳನ್ನು ಯುವ ಜನಾಂಗಕ್ಕೆ ತಿಳಿ ಹೇಳಲು ಇಂತಹ ಪ್ರದರ್ಶನವನ್ನು ರಾಜ್ಯದ ಇತರೆ ಭಾಗದಲ್ಲಿಯೂ ಆಯೋಜಿಸುವುದು ಸೂಕ್ತ ಎಂದು ಹೇಳಿದರು.ತುಮಕೂರು ವಿಶ್ವವಿದ್ಯಾನಿಲಯದ ಕುಲಪತಿ ಅನಂತರಾಮಯ್ಯ ಮಾತನಾಡಿ, ತುಮಕೂರು ವಿಶ್ವವಿದ್ಯಾನಿಲ ಯದಲ್ಲಿ ಮುಂದಿನ ತಿಂಗಳು ಗಾಂಧೀ ಭವನ ಉದ್ಘಾಟಿಸಲಾಗುತ್ತಿದೆ ಎಂದರು.

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕ ಮನು ಬಳಿಗಾರ್, ಬೆಂಗಳೂರು ಗಾಂಧೀ ಶಾಂತಿ ಪ್ರತಿಷ್ಠಾನ ಅಧ್ಯಕ್ಷ ಡಬ್ಲ್ಯು.ಪಿ. ಕೃಷ್ಣ, ಸ್ವಾತಂತ್ರ್ಯ ಹೋರಾಟಗಾರ ಡಾ। ಹೊ.ಶ್ರೀನಿವಾಸಯ್ಯ ಸೇರಿದಂತೆ ಇತರೆ ಗಣ್ಯರು ಪಾಲ್ಗೊಂಡಿದ್ದರು.

ವಿಜಯ ಕರ್ನಾಟಕ | ಶನಿವಾರ, 19 ಜುಲೈ 2008

# ನೂತನ ದೃಷ್ಟಿಕೋನದಿಂದ ಗಾಂಧಿ ವಿಚಾರಧಾರೆ ಅರ್ಥೈಸಿ: ಠಾಕೂರ್

**ವಿಕ ಸುದ್ದಿಲೋಕ**

**ಬೆಂಗಳೂರು:** ಗಾಂಧೀಜಿಯವರ ವಿಚಾರಧಾರೆಗಳನ್ನು ನೂತನ ದೃಷ್ಟಿಕೋನದಿಂದ ಅರ್ಥೈಸಬೇಕಾಗಿದೆ ಎಂದು ರಾಜ್ಯಪಾಲ ರಾಮೇಶ್ವರ ಠಾಕೂರ್ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಗಾಂಧೀ ಶಾಂತಿ ಪ್ರತಿಷ್ಠಾನದ ಆಶ್ರಯದಲ್ಲಿ ನಗರದ ಗಾಂಧಿ ಭವನದಲ್ಲಿ ಏರ್ಪಡಿಸಲಾಗಿರುವ ರಾಷ್ಟ್ರೀಯ ಸಾಹಿತ್ಯ ಪುಸ್ತಕಗಳ ಪ್ರದರ್ಶನ ಹಾಗೂ ಮಾರಾಟ ಮೇಳವನ್ನು ಗುರುವಾರ ಉದ್ಘಾಟಿಸಿ ದರು.

'ಗಾಂಧೀಜಿ ತತ್ತ್ವಗಳು ಇಂದಿಗೂ ಪ್ರಸ್ತುತವಾಗಿವೆ. ಆದರೆ ಯುವಕರಲ್ಲಿ ಅವುಗಳ ಬಗ್ಗೆ ಆಸಕ್ತಿ ಮೂಡಿ ಸಲು ನೂತನ ದೃಷ್ಟಿಕೋನ ನೀಡಬೇಕಾಗಿದೆ. ಇಡೀ ಪ್ರಪಂಚ ಗಾಂಧಿ ತತ್ತ್ವಗಳನ್ನು ಅನುಸರಿಸಬೇಕಾಗಿದೆ ಎಂದರು.

'ಸಂಪೂರ್ಣವಾಗಿ ಅಹಿಂಸಾ ತತ್ತ್ವದಿಂದಲೇ ದೇಶ ಸ್ವಾತಂತ್ರ್ಯ ಗಳಿಸಿರುವುದನ್ನು ಯುವಕರಿಗೆ ತಿಳಿಸಬೇಕಾಗಿದೆ. ಇಂತಹ ಸಮಯದಲ್ಲಿ ಈ ಪುಸ್ತಕ ಪ್ರದರ್ಶನ ಏರ್ಪಡಿಸಿರುವುದು ಸಮಂಜಸವಾಗಿದೆ ಎಂದರು.

'ಗಾಂಧಿ ಸ್ಮಾರಕ ನಿಧಿಯ ಪುಸ್ತಕ ಸಂಗ್ರಹಾಲಯದಲ್ಲಿ ಇರುವ ಪುಸ್ತಕಗಳ ಸಂಖ್ಯೆಯನ್ನು ಹೆಚ್ಚಿಸಬೇಕು. ಅವರ ತತ್ತ್ವಗಳು ಹಾಗೂ ಪುಸ್ತಕಗಳ ಕುರಿತು ಅಧ್ಯಯನ ಮಾಡುವವರಿಗೆ ಇದರಿಂದ ನೆರವಾಗಬೇಕು. ಗಾಂಧಿ ಪುಸ್ತಕಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸಲು ಇಂತಹ ಪ್ರದರ್ಶನಗಳನ್ನು ಏರ್ಪಡಿಸಬೇಕು' ಎಂದರು. ಸ್ಮಾರಕ ನಿಧಿಯ ಅಧ್ಯಕ್ಷ ಗೋಪಿನಾಥನ್ ನಾಯರ್, ಕೇಂದ್ರ ಗಾಂಧೀ ಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಸುರೇಂದ್ರಕುಮಾರ್, ಡಬ್ಲ್ಯು.ಪಿ. ಕೃಷ್ಣ, ಮನು ಬಳಿಗಾರ್, ಡಾ.ಹೊ. ಶ್ರೀನಿವಾಸಯ್ಯ, ಪ್ರೊ ದಾಸೇಗೌಡ ಪಾಲ್ಗೊಂಡಿದ್ದರು.

ಪ್ರಜಾವಾಣಿ

18ನೇ ಜುಲೈ 2008



ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಬೆಂಗಳೂರಿನ ಗಾಂಧಿ ಶಾಂತಿ ಪ್ರತಿಷ್ಠಾನದ ವತಿಯಿಂದ ಗುರುವಾರ ಹಮ್ಮಿಕೊಂಡಿದ್ದ ಗಾಂಧಿ ಸಾಹಿತ್ಯ ಮತ್ತು ರಾಷ್ಟ್ರೀಯ ಸಾಹಿತ್ಯ ಪುಸ್ತಕ ಪ್ರದರ್ಶನ ಹಾಗೂ ಮಾರಾಟವನ್ನು ರಾಜ್ಯಪಾಲ ರಾಮೇಶ್ವರ ಠಾಕೂರ್ ಉದ್ಘಾಟಿಸಿದರು. -ಪ್ರಜಾವಾಣಿ ಚಿತ್ರ

# 'ಗಾಂಧಿ ತತ್ವ ಮೈಗೂಡಿಸಿಕೊಳ್ಳಿ'

ಪ್ರಜಾವಾಣಿ ವಾರ್ತೆ

ಬೆಂಗಳೂರು: "ಗಾಂಧೀಜಿಯವರ ತತ್ವಗಳು ಹಿಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತವಾಗಿದ್ದು ಯುವಜನತೆ ಅವರ ತತ್ವಗಳನ್ನು ಮೈಗೂಡಿಸಿಕೊಳ್ಳಬೇಕಾದ ಅಗತ್ಯವಿದೆ' ಎಂದು ರಾಜ್ಯಪಾಲ ರಾಮೇಶ್ವರ ಠಾಕೂರ್ ಇಲ್ಲಿ ಅಭಿಪ್ರಾಯಪಟ್ಟರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಬೆಂಗಳೂರಿನ ಗಾಂಧಿ ಶಾಂತಿ ಪ್ರತಿಷ್ಠಾನದ ವತಿಯಿಂದ ಗುರುವಾರ ಹಮ್ಮಿಕೊಂಡಿದ್ದ ಗಾಂಧಿ ಸಾಹಿತ್ಯ, ಸರ್ವೋದಯ ಸಾಹಿತ್ಯ ಮತ್ತು ರಾಷ್ಟ್ರೀಯ ಸಾಹಿತ್ಯ ಪುಸ್ತಕ ಪ್ರದರ್ಶನ ಹಾಗೂ ಮಾರಾಟ ಉದ್ಘಾಟಿಸಿ ಅವರು ಮಾತನಾಡಿದರು.

ಮಹಾತ್ಮ ಗಾಂಧೀಜಿಯವರ ತ್ಯಾಗದ ಬಗ್ಗೆ ಇಂದಿನ ಯುವ ಪೀಳಿಗೆ ಅರಿತುಕೊಳ್ಳಬೇಕು. ಅಹಿಂಸೆಯಿಂದಲೇ ಸ್ವಾತಂತ್ರ್ಯ ಗಳಿಸಿರುವ ಬಗ್ಗೆ ಯುವ ಪೀಳಿಗೆಗೆ ಮನದಟ್ಟಾಗಬೇಕಿದೆ. ಅಷ್ಟೇ ಅಲ್ಲ ಅಂದಿನ ಚರಿತ್ರಾರ್ಹ ಘಟನೆಗಳು ಜನಮಾನಸದಿಂದ ಕೂಡ ಮರೆಯಾಗುತ್ತಿವೆ. ಇಂತಹ ಸನ್ನಿವೇಶದಲ್ಲಿ ಹಮ್ಮಿಕೊಳ್ಳುವ ಈ ಕಾರ್ಯಕ್ರಮಗಳು ಹೆಚ್ಚು ಅರ್ಥಪೂರ್ಣ ಎಂದು ಅವರು ಮೆಚ್ಚುಗೆ ವ್ಯಕ್ತಪಡಿಸಿದರು.

ಕೇರಳದ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಗೋಪಿನಾಥ್ ನಾಯರ್ ಮಾತನಾಡಿ, ಗಾಂಧೀಜಿಯವರ ತತ್ವಗಳನ್ನು ಮತ್ತೆ ಸಾರ್ವಜನಿಕರ ಬಳಿಗೆ ಒಯ್ಯಬೇಕಿದೆ. ಅಹಿಂಸೆಯಿಂದಲೇ ಎಲ್ಲವೂ ಸಾಧ್ಯ ಎನ್ನುವ ಬಗ್ಗೆ ತಿಳಿವಳಿಕೆ ಮೂಡಿಸಬೇಕಿದೆ ಎಂದರು.

ಪ್ರದರ್ಶನ ಮತ್ತು ಮಾರಾಟ: ಇದೇ 24ರವರೆಗೆ ನಡೆಯುವ ಈ ಪ್ರದರ್ಶನದಲ್ಲಿ ಸಾರ್ವಜನಿಕರಿಗಾಗಿ ಗಾಂಧೀಜಿಯವರ ಕುರಿತ ಚಲನ ಚಿತ್ರಗಳನ್ನು, ಪುಸ್ತಕ, ಅಂಚೆಚೀಟಿ ಮತ್ತು ನಾಣ್ಯಗಳ ಪ್ರದರ್ಶನವನ್ನು ಏರ್ಪಡಿಸಲಾಗಿದೆ.

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕ ಮನು ಬಳಿಗಾರ್, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ.ಕೃಷ್ಣ ಹಾಗೂ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ಹೋ ಶ್ರೀನಿವಾಸಯ್ಯ, ಕಾರ್ಯದರ್ಶಿ ಪ್ರೊ. ಎಚ್.ಆರ್. ದಾಸೇಗೌಡ ಹಾಜರಿದ್ದರು.

ವಿ ಟೈಮ್ಸ್ ಆಫ್ ಇಂಡಿಯಾ, ಬೆಂಗಳೂರು
ಶುಕ್ರವಾರ, ಜುಲೈ 18, 2008

# ಗಾಂಧಿ ಚಿಂತನೆಗೆ ಹೆಬ್ಬಾಗಿಲು ಈ ಪ್ರದರ್ಶನ

ಟೈಮ್ಸ್ ನ್ಯೂಸ್ ನೆಟ್‌ವರ್ಕ್

ಬೆಂಗಳೂರು: ಮಹಾತ್ಮ ಗಾಂಧಿ ಜೀವನ, ಚಿಂತನೆ, ಆದರ್ಶ ಹಾಗೂ ಕಲ್ಪನೆ ವಿಶ್ವಾದ್ಯಂತ ಮಿಲಿಯಾಂತರ ಜನರಿಗೆ ಪ್ರೇರಣೆಯಾಗಿವೆ.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಗಾ[illegible] ಶಾಂತಿ ಪ್ರತಿಷ್ಠಾನ ನಗರದ ಗಾಂಧಿ ಭ[illegible]ನದಲ್ಲಿ ಆಯೋಜಿಸಿರುವ ಗಾಂಧೀಜಿ, ಸರ್ವೋ[illegible]ದಯ ಮತ್ತು ರಾಷ್ಟ್ರೀಯ ಸಾಹಿತ್ಯ ಪುಸ್ತಕ ಪ್ರದರ್ಶನ ರಾಷ್ಟ್ರೀಯವಾದಿಗಳು ಮತ್ತು ಸ್ವಾತಂತ್ರ್ಯ ಚಳವಳಿ ಬಗ್ಗೆ ಅರಿಯಲು ಯುವಜನಾಂಗಕ್ಕೆ ಹೆಬ್ಬಾಗಿಲಾಗಿದೆ.

ಈ ಪ್ರದರ್ಶನದಲ್ಲಿ ಖಾಸಗಿ ಪುಸ್ತಕ ಮಾರಾಟಗಾರರು, ಬೃಹತ್ ಪುಸ್ತಕ ಮಳಿಗೆಗಳು, ಸರ್ಕಾರಿ ಪುಸ್ತಕ ಮಾರಾಟಗಾರರು ಹಾಗೂ ಪುಸ್ತಕ ಪ್ರದರ್ಶಕರು ಮಹಾತ್ಮ ಗಾಂಧಿ, ಭಗತ್ ಸಿಂಗ್, ಬಾಲ ಗಂಗಾಧರ ತಿಲಕ್ ಮತ್ತು ಚಂದ್ರಶೇಖರ್ ಆಜಾದ್ ಕುರಿತ ಪುಸ್ತಕಗಳನ್ನು ಪ್ರದರ್ಶನ ಮತ್ತು ಮಾರಾಟಕ್ಕೆ ವ್ಯವಸ್ಥೆ ಮಾಡಿದ್ದಾರೆ.

ಕನ್ನಡ, ಹಿಂದಿ ಮತ್ತು ಇಂಗ್ಲಿಷ್‌ನಲ್ಲಿ ಹಲವು ದೇಶಭಕ್ತ ಪುಸ್ತಕಗಳು ಮಾರಾಟಕ್ಕೆ ಲಭ್ಯವಿವೆ. ಈ ತಿಂಗಳ 24ರವರೆಗೆ ಪ್ರದರ್ಶನ ನಡೆಯಲಿದೆ. ಖಾದಿ ಉಡುಪು ಮತ್ತು ರಾಷ್ಟ್ರಧ್ವಜ ಮಾರಾಟ ಮಾಡುವ ಮಳಿಗೆಗಳೂ ಇವೆ.

ಗತಕಾಲದ ಚರಕ ಹಾಗೂ ರೆಡಿಯೋ, ಬಲ್ಬ್ ಉರಿಯಲು ವಿದ್ಯುತ್ ತಯಾರಿಸಿಕೊಳ್ಳುವ ಆಧುನಿಕ ಎಲೆಕ್ಟ್ರಾನಿಕ್ ಚರಕ ಪ್ರದರ್ಶನ ಕೂಡ ಇದೆ.



ಬೆಂಗಳೂರಿನಲ್ಲಿ ಗುರುವಾರ ನಡೆದ ಗಾಂಧೀಜಿ, ಸರ್ವೋದಯ ಮತ್ತು ರಾಷ್ಟ್ರೀಯ ಸಾಹಿತ್ಯ ಪುಸ್ತಕ ಪ್ರದರ್ಶನ ಉದ್ಘಾಟನೆ ಕಾರ್ಯಕ್ರಮದಲ್ಲಿ ರಾಜ್ಯಪಾಲ ರಾಮೇಶ್ವರ ಠಾಕೂರ್ ಅವರೊಂದಿಗೆ ಸಂಭಾಷಿಸುತ್ತಿರುವ ಕೇಂದ್ರ ಗಾಂಧಿ ಸ್ಮಾರಕ ನಿಧಿಯ ಉಪಾಧ್ಯಕ್ಷ ಗೋಪಿನಾಥ ನಾಯರ್. ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ ಇದ್ದಾರೆ.

ಪ್ರೊ. ವಿ.ಎಸ್. ಯಲವಗಿ ಸಂಗ್ರಹಿಸಿರುವ ಗಾಂಧೀಜಿ ಭಾವಚಿತ್ರ ಇರುವ ಅಂಚೆಚೀಟಿ ಮತ್ತು ನಾಣ್ಯಗಳನ್ನು ಪ್ರದರ್ಶನಕ್ಕಿಡಲಾಗಿದೆ.

ಎಂಟು ದಿನಗಳ ಪ್ರದರ್ಶನಕ್ಕೆ ಗುರುವಾರ ಚಾಲನೆ ನೀಡಿದ ರಾಜ್ಯಪಾಲ ರಾಮೇಶ್ವರ ಠಾಕೂರ್, ಗಾಂಧೀಜಿ ಅವರ ಗ್ರಾಮ ಸ್ವರಾಜ್ಯದ ಕನಸು ಪಂಚಾಯತ್ ರಾಜ್ ಸಂಸ್ಥೆಗಳ ಮೂಲಕ ನನಸಾಗುತ್ತಿದೆ ಎಂದು ಹೇಳಿದರು.

ಜನಮಾಸದಿಂದ ಗಾಂಧೀಜಿ ನೆನಪು ಮರೆಯಾಗುತ್ತಿರುವ ಪ್ರಸ್ತುತದಲ್ಲಿ ಈ ಪ್ರದರ್ಶನ ಆಯೋಜಿಸಿರುವುದು ಉತ್ತಮ ಕಾರ್ಯ ಎಂದು ಶ್ಲಾಘಿಸಿದ ಅವರು, ಗಾಂಧಿ ಸ್ಮಾರಕ ನಿಧಿ ಅಭಿವೃದ್ಧಿಪಡಿಸಿರುವ ಗಾಂಧಿ ಸಾಹಿತ್ಯ ಕುರಿತ ಗ್ರಂಥಾಲಯವನ್ನು ಗಾಂಧೀಜಿ ಕುರಿತು ಅಧ್ಯಯನ ಮಾಡುವ ಆಸಕ್ತರ ಬಳಕೆಗೆ ಮೀಸಲಿಡಬೇಕು ಎಂದು ಅಭಿಪ್ರಾಯ ಪಟ್ಟರು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕ ಮನುಬಳಿಗಾರ್, ಕೇಂದ್ರ ಸ್ಮಾರಕ ನಿಧಿ ಉಪಾಧ್ಯಕ್ಷ ಗೋಪಿನಾಥ್ ನಾಯರ್, ಗಾಂಧಿ ಪೀಸ್ ಫೌಂಡೇಷನ್ ಅಧ್ಯಕ್ಷ ಡಬ್ಲ್ಯೂ.ಪಿ. ಕೃಷ್ಣ ಹಾಗೂ ಹಿರಿಯ ಸ್ವಾತಂತ್ರ್ಯ ಹೋರಾಟ ಗಾರರು ಪಾಲ್ಗೊಂಡಿದ್ದರು.

## ಉದಯವಾಣಿ

### ಗುರುವಾರ 17 ಜುಲೈ 2008

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಗಾಂಧೀ ಶಾಂತಿ ಪ್ರತಿಷ್ಠಾನ: ಗಾಂಧಿ ಭವನ, ಶಿವಾನಂದ ವೃತ್ತ. ಗಾಂಧೀ ಸಾಹಿತ್ಯ, ಸರ್ವೋದಯ ಸಾಹಿತ್ಯ ಮತ್ತು ರಾಷ್ಟ್ರೀಯ ಸಾಹಿತ್ಯದ ಪುಸ್ತಕ ಪ್ರದರ್ಶನ ಹಾಗೂ ಮಾರಾಟ. ಉದ್ಘಾಟನೆ: ರಾಜ್ಯಪಾಲ ರಾಮೇಶ್ವರ ಠಾಕೂರ್. ಅಧ್ಯಕ್ಷತೆ: ಕೇರಳ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಗೋಪಿನಾಥನ್ ನಾಯರ್. ಅತಿಥಿ: ಕೇಂದ್ರ ಗಾಂಧೀ ಶಾಂತಿ ಪ್ರತಿಷ್ಠಾನ ಕಾರ್ಯದರ್ಶಿ ಸುರೇಂದ್ರಕುಮಾರ್, ಗಾಂಧೀ ಶಾಂತಿ ಪ್ರತಿಷ್ಠಾನ ಅಧ್ಯಕ್ಷ ಡಬ್ಲ್ಯು.ಪಿ. ಕೃಷ್ಣ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕ ಮನು ಬಳಿಗಾರ್, ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ। ಹೋ.ಶ್ರೀನಿವಾಸಯ್ಯ ಮತ್ತಿತರರು. ಬೆಳಿಗ್ಗೆ 11.

## ಸಂಯುಕ್ತ ಕರ್ನಾಟಕ,

### 17-7-2008

11-00 ಕುಮಾರಕೃಪಾ ರಸ್ತೆ, ಗಾಂಧಿಭವನ. ಗಾಂಧಿ ಸಾಹಿತ್ಯ, ಸರ್ವೋದಯ ಸಾಹಿತ್ಯ ಮತ್ತು ರಾಷ್ಟ್ರೀಯ ಸಾಹಿತ್ಯ ಪುಸ್ತಕಗಳ ಪ್ರದರ್ಶನ ಹಾಗೂ ಮಾರಾಟ. ಉದ್ಘಾಟನೆ: ರಾಜ್ಯಪಾಲ ರಾಮೇಶ್ವರ ಠಾಕೂರ್, ಅಧ್ಯಕ್ಷತೆ: ಗೋಪಿನಾಥ್ ನಾಯರ್, ಮುಖ್ಯ ಅತಿಥಿಗಳು: ಸುರೇಂದ್ರ ಕುಮಾರ್, ಡಬ್ಲ್ಯು.ಪಿ.ಕೃಷ್ಣ, ಮನು ಬಳಿಗಾರ್, ಡಾ. ಹೊ. ಶ್ರೀನಿವಾಸಯ್ಯ.

ಪ್ರಜಾವಾಣಿ

# ಗಾಂಧೀಜಿ ಚಿಂತನೆ ಕಡೆಗಣಿಸಿದ ಯುವಕರು: ರಾಜ್ಯಪಾಲರ ವಿಷಾದ




ಕರ್ನಾಟಕ ಗಾಂಧಿ ಸ್ಮಾರಕನಿಧಿ ಗಾಂಧಿಭವನದಲ್ಲಿ ಹಮ್ಮಿಕೊಂಡಿದ್ದ ಗಾಂಧಿ ಸಾಹಿತ್ಯ, ಸರ್ವೋದಯ ಸಾಹಿತ್ಯ ಮತ್ತು ರಾಷ್ಟ್ರೀಯ ಸಾಹಿತ್ಯದ ಪುಸ್ತಕ ಪ್ರದರ್ಶನ ಕಾರ್ಯಕ್ರಮದಲ್ಲಿ ರಾಜ್ಯಪಾಲ ರಾಮೇಶ್ವರಠಾಕೂರ್, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕ ಮನುಬಳಿಗಾರ್, ಕೇಂದ್ರ ಗಾಂಧಿಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಸುರೇಂದ್ರಕುಮಾರ್, ಸಾಹಿತಿ ಡಾ. ಹೊ. ಶ್ರೀನಿವಾಸಯ್ಯ, ಕೆ. ಕೃಷ್ಣ ಇದ್ದಾರೆ.

(ನಮ್ಮ ಪ್ರತಿನಿಧಿಯಿಂದ)

ಬೆಂಗಳೂರು, ಜು. ೧೬: ರಾಷ್ಟ್ರಪಿತ ಮಹಾತ್ಮಾಗಾಂಧಿಯವರ ತತ್ವಗಳು, ಚಿಂತನೆಗಳು ಎಂದಿಗೂ ಪ್ರಸ್ತುತವೆನಿಸಿವೆ. ಆದರೆ ಯುವ ಜನಾಂಗದವರು ಅವರ ತತ್ವ, ಚಿಂತನೆಗಳನ್ನು ಅರ್ಥಮಾಡಿಕೊಳ್ಳುವಲ್ಲಿ ವಿಫಲರಾಗಿದ್ದಾರೆ ಎಂದು ರಾಜ್ಯಪಾಲ ರಾಮೇಶ್ವರ ಠಾಕೂರ್ ಅವರು ವಿಷಾದ ವ್ಯಕ್ತಪಡಿಸಿದ್ದಾರೆ.

ಅಹಿಂಸೆ ಮೂಲಕ ದೇಶಕ್ಕೆ ಸ್ವಾತಂತ್ರ್ಯ ತಂದುಕೊಡುವಲ್ಲಿ ಮಹಾತ್ಮಾಗಾಂಧಿಯವರು ಹೇಗೆ ಶ್ರಮಪಟ್ಟರು ಎಂಬುದನ್ನು ಯುವ ಜನಾಂಗದವರು ಅರ್ಥಮಾಡಿಕೊಳ್ಳಬೇಕಾಗಿದೆ ಎಂದು ಅವರು ಹೇಳಿದರು.

ನಗರದ ಗಾಂಧಿ ಭವನದಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಏರ್ಪಡಿಸಿದ್ದ 8 ದಿನಗಳ ಗಾಂಧಿ ಸಾಹಿತ್ಯ, ಸರ್ವೋದಯ ಸಾಹಿತ್ಯ ಕುರಿತಂತೆ ಪುಸ್ತಕ ಪ್ರದರ್ಶನ ಮತ್ತು ಮಾರಾಟವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಗಾಂಧಿ ಸಾಹಿತ್ಯ ಕುರಿತಂತೆ ಇಂದು ವ್ಯಾಪಕವಾಗಿ ಪ್ರಚಾರವಾಗಬೇಕಾಗಿದೆ. ಪುಸ್ತಕದ ಮಳಿಗೆಗಳಲ್ಲಿ ಗಾಂಧೀಜಿಯವರ ಎಲ್ಲ ಸಾಹಿತ್ಯಗಳು ಲಭ್ಯವಾಗಬೇಕು ಎಂದು ಅವರು ಹೇಳಿದರು.

ಸಮಾರಂಭದ ಅತಿಥಿಯಾಗಿ ಭಾಗವಹಿಸಿದ್ದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕ ಮನು ಬಳಿಗಾರ್ ಅವರು ಮಾತನಾಡಿ, ಗಾಂಧಿ ಸಾಹಿತ್ಯ ಕುರಿತಂತೆ ಇಲಾಖೆಯು ಎಲ್ಲ ಅಗತ್ಯ ನೆರವು ನೀಡುವುದಾಗಿ ಭರವಸೆ ನೀಡಿದರು.

ತುಮಕೂರು ವಿಶ್ವವಿದ್ಯಾಲಯದಿಂದ ಉಪಕುಲಪತಿ ಅನಂತರಾಮಯ್ಯ ಅವರು ಮಾತನಾಡಿ, ತುಮಕೂರು ವಿಶ್ವವಿದ್ಯಾಲಯದಲ್ಲಿ ಗಾಂಧಿ ಭವನ ಮುಂದಿನ ತಿಂಗಳು ಉದ್ಘಾಟನೆಯಾಗಲಿದೆ ಎಂದು ತಿಳಿಸಿದರು.

ಬೆಂಗಳೂರಿನ ಹೆಮ್ಮೆಯ ಸಂಸ್ಥೆಗಳು: ಭಾರತ ಸೇವಾ ದಲ

# ಚಿನ್ನದ ಮೆರುಗಿನ ಶಾಲಾ ಶಾಖೆ

ಬೆಂಗಳೂರು ಇತಿಹಾಸಮಾಲೆ



■ ಸುರೇಶ್ ಮೂನ

**ಚಿನ್ನದ ಮೆರುಗು ಪಡೆದ ಶೇಷಾದ್ರಿಪುರಂ ಪ್ರೌಢಶಾಲೆಯ ಭಾರತ ಸೇವಾದಲ ಸರ್ವೋದಯ ಶಾಖೆ ಶತಮಾನೋತ್ಸವ ಸಂಭ್ರಮವನ್ನು ಆಚರಿಸುವಂತಾಗಲಿ ಎಂಬುದು ಹಿತೈಷಿಗಳ ಹಾರೈಕೆ.**

ಶೇಷಾದ್ರಿಪುರಂ ಪ್ರೌಢಶಾಲೆಯ ಭಾರತ ಸೇವಾದಲ ಸರ್ವೋದಯ ಶಾಖೆಗೆ ಇರುವ ಅತ್ಯುತ್ತಮ ಪ್ರಯೋಜನವೆಂದರೆ ಕೂಗಳತೆ ದೂರದಲ್ಲಿ ಗಾಂಧಿ ಭವನ ಮತ್ತು ಸೇವಾದಲದ ಪ್ರಧಾನ ಕಛೇರಿಗಳಿರುವುದು. ಹೀಗಾಗಿ ಮೊದಲಿನಿಂದ ಈ ಎರಡೂ ಕೇಂದ್ರಗಳ ಹಿರಿಯರ ದಿವ್ಯದೃಷ್ಟಿ ಹಾಗೂ ಮಾರ್ಗದರ್ಶನಗಳು ಈ ಶಾಖೆಗೆ ದೊರಕಿವೆ. ಐ.ಎನ್.ಎ. ರಾಮರಾಯರಿಗಂತೂ ಈ ಶಾಖೆಯ ಮಕ್ಕಳೆಂದರೆ ವಿಶೇಷ ಪ್ರೀತಿ. ಅವರ ಪ್ರೀತಿಗೆ ಪಾತ್ರರಾಗಿ ಬೆಳೆದು ಇಂದು ಸಮಾಜದ ವಿವಿಧ ಸ್ಥಾನಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು, ರಾಮರಾಯರನ್ನು ನೆನಪಿಸಿಕೊಳ್ಳುವವರ ಸಂಖ್ಯೆ ಅಪಾರ. ಅವರು ನಾ.ಸು. ಹರ್ಡೀಕರ್ ಅವರನ್ನು ಒಮ್ಮೆ ಈ ಶಾಲೆಗೆ ಕರೆತಂದಿದ್ದುಂಟು.

ಈ ಶಾಖೆಯ ಮತ್ತೊಂದು ವೈಶಿಷ್ಟ್ಯ - ಸೇವಾದಲದ ಕೇಂದ್ರ ಆಡಳಿತ ಮಂಡಳಿಯ ಕೋಶಾಧ್ಯಕ್ಷರಾಗಿರುವ ವೂಡೆ ಪಿ. ಕೃಷ್ಣ ಅವರೇ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಆಗಿರುವುದು. ಇವರು ಗಾಂಧಿವಾದಿ ಹಿರಿಯರು ಹಾಗೂ ರಾಮರಾಯರಿಂದ ಪ್ರಭಾವಿತರಾಗಿ ಕಾಲೇಜು ದಿನಗಳಿಂದಲೂ ಸೇವಾ ಕಾರ್ಯಗಳಲ್ಲಿ ತೊಡಗಿಸಿಕೊಂಡವರು. ಯುವ ಸಂಘಟನೆಗಳ ನಾಯಕತ್ವ ವಹಿಸಿ ಕ್ರಿಯಾತ್ಮಕ ಚಟುವಟಿಕೆಗಳಿಗಾಗಿ ಯುವ ಪ್ರಶಸ್ತಿ ಪಡೆದವರು. ಇದರಿಂದಾಗಿಯೇ ಈ ಶಾಖೆಯ ಎಲ್ಲ ಯೋಜನೆಗಳು ವ್ಯವಸ್ಥಿತವಾಗಿ, ಸಮರ್ಪಕವಾಗಿ ನೆರವೇರುತ್ತಿವೆ.

ಶಾಖೆಯ ನಾಯಕರಾದ ಆರ್. ರಂಗಣ್ಣ, ಕ.ಶ್ರೀ.ನಾ. ಮೂರ್ತಿಯವರು ಈ ಶಾಲೆಯಲ್ಲಿರುವಾಗಲೇ ಶಾಲೆಯ ಉದ್ಯೋಗಕ್ಕೆ ಸೇರಿ ಅವರಿಂದ, ರಾಮರಾಯರಿಂದ ತರಬೇತಿ ಪಡೆದವರು. ಮೂರ್ತಿಯವರು ನಿವೃತ್ತಿಯಾದ ನಂತರ ಶಾಖಾ ನಾಯಕರ ಜವಾಬ್ದಾರಿಯನ್ನು ವಹಿಸಿಕೊಂಡರು. ಎಲ್ಲ ಕಾರ್ಯಗಳನ್ನು ಅದೇ ಕ್ರಮದಲ್ಲಿ ನಿರ್ವಹಿಸುತ್ತಾ ಹಲವಾರು ಶಿಕ್ಷಕ ತರಬೇತಿ ಶಿಬಿರಗಳಲ್ಲಿ ಶಿಕ್ಷಕರಿಗೂ ಮಾರ್ಗದರ್ಶನ ಮಾಡುತ್ತಾ ಬಂದಿದ್ದಾರೆ.

ಬೆಳ್ಳಿಹಬ್ಬದ ಕಾಲದಿಂದಲೂ ಮುಖ್ಯೋಪಾಧ್ಯಾಯರು ಹಾಗೂ ಈಗ ಪ್ರಾಂಶುಪಾಲರಾಗಿರುವ ಎಚ್.ಎನ್. ಶಿವಕುಮಾರ್ ಅರಾಧ್ಯ ಅವರ ನಿರಂತರ ಪ್ರೋತ್ಸಾಹ, ಸಕ್ರಿಯವಾಗಿ ಪಾಲ್ಗೊಳ್ಳುವಿಕೆಯೂ ಇರುವುದರಿಂದ ಈ ಶಾಖೆ ವೈವಿಧ್ಯಮಯ ಸೇವಾ ಕಾರ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸಿದೆ. ಶಿಕ್ಷಣ ಇಲಾಖೆಯ ಆಯುಕ್ತರ ಕಛೇರಿಯಲ್ಲಿ ರಾಷ್ಟ್ರಧ್ವಜಾರೋಹಣ ಮಾಡಿರುವ ಹೆಗ್ಗಳಿಕೆ ಹೊಂದಿರುವ ಈ ಶಾಖೆ, ನಾಡಿನ ಹಸಿರು ಸಂಪತ್ತಿನ ಉಳಿವಿಗಾಗಿ ವಿಶೇಷ ಪ್ರಯತ್ನ ನಡೆಸಿದೆ. ಔಷಧಿ ಸಸ್ಯಗಳಿಗೆ ಪ್ರಸಿದ್ಧವಾದ ಸಿದ್ಧರಬೆಟ್ಟದಲ್ಲಿ 'ಪರಿಸರ ಜಾಗೃತಿ' ಕಾರ್ಯಕ್ರಮ ಹಮ್ಮಿಕೊಂಡಿದೆ. ಆಗ ತುಮಕೂರಿನ ರಾಮಕೃಷ್ಣಾಶ್ರಮದ ಸ್ವಾಮಿ ವೀರೇಶಾನಂದ ಸರಸ್ವತಿಯವರು ಮೊದಲ ಸಸಿ ನೆಟ್ಟು ಮಕ್ಕಳ ಈ ಬಗೆಗಿನ ಪರಿಸರ ಕಾಳಜಿಯನ್ನು ಉತ್ತೇಜಿಸಿದ್ದಾರೆ. ಈ ಸಂಬಂಧವಾಗಿ ಇಲ್ಲಿ ಏರ್ಪಡಿಸಿದ ಸಭೆಯಲ್ಲಿ ವೂಡೇ ಪಿ. ಕೃಷ್ಣ ಅವರು ಈ ಬಗ್ಗೆ ಆಡಿದ; ಅರಿವು ಮೂಡಿಸುವ ಮಾತುಗಳನ್ನು ಕೇಳಲು ಸಭಾಂಗಣದ ತುಂಬಾ ಸ್ಥಳೀಯರು ಸೇರಿದ್ದುದು ವಿಶೇಷ ಸಂಗತಿ. ಇದೇ ರೀತಿಯ ಸಸಿ ನೆಡುವ ಕಾರ್ಯಕ್ರಮವನ್ನು ಮಾದನಾಯಕನಹಳ್ಳಿಯಲ್ಲಿ ನೆರವೇರಿಸಿದೆ. ಶಿಕ್ಷಕರ ಕಾರ್ಯದಲ್ಲಿನ ಗುಣಮಟ್ಟದ ಉನ್ನತೀಕರಣಕ್ಕಾಗಿ ಶಿಕ್ಷಕರ ಕಲ್ಯಾಣ ನಿಧಿ ಇಲಾಖೆಯೊಂದಿಗೆ ಸಂಪನ್ಮೂಲ ಶಿಕ್ಷಕರ ತರಬೇತಿ ಶಿಬಿರ ನಡೆಸಿದೆ. ರಕ್ತದಾನದ ವ್ಯವಸ್ಥೆ ಮಾಡಿದೆ.






ಪರಿಸರವನ್ನು ಶುಚಿಯಾಗಿಡಲು ಪೆನ್ನು ಹಿಡಿಯುವ ಮಕ್ಕಳ ಕೈಗಳು ಪೊರಕೆ ಹಿಡಿದು ನೆಲ ಗುಡಿಸಿವೆ. ಪ್ರಸ್ತುತ ಸಚಿವರಾಗಿರುವ ರಾಮಚಂದ್ರೇಗೌಡರೂ ಸೇರಿದಂತೆ ವಿವಿಧ ಉನ್ನತ ಸ್ಥಾನಗಳಲ್ಲಿರುವ ಈ ಶಾಖೆಯ ವಿದ್ಯಾರ್ಥಿಗಳು ತಮ್ಮ ವ್ಯಕ್ತಿತ್ವವನ್ನು ರೂಪಿಸಿದ ಸಂಸ್ಥೆಯನ್ನು ಕೃತಜ್ಞತೆಯಿಂದ ಸ್ಮರಿಸುತ್ತಾರೆ.

ಹೀಗೆ 5 ದಶಕಗಳ ಸೇವೆಯನ್ನು ಪೂರೈಸಿ ಮುನ್ನುಗ್ಗುತ್ತಿರುವ ಈ ಶಾಖೆ ಸುವರ್ಣ ಮಹೋತ್ಸವವನ್ನು ಆಚರಿಸಿ ಚಿನ್ನದ ಮೆರುಗು ಪಡೆದ ಮೊದಲ ಶಾಖೆ ಎಂಬ ಹೆಮ್ಮೆಯನ್ನು ಪಡೆದುಕೊಂಡಿತು. 2007 ಫೆ. 2 ರಂದು ಶಾಲಾ ಆವರಣದಲ್ಲಿ ಅರ್ಥಪೂರ್ಣ ಕಾರ್ಯಕ್ರಮ ನಡೆಯಿತು. ವಿಜ್ಞಾನ ಮತು ತಂತ್ರಜ್ಞಾನ ಸಚಿವರು ಈ ಶಾಖೆಯ ಸೇವಾದಲದ ನಾಯಕರೂ ಆಗಿದ್ದ ರಾಮಚಂದ್ರೇಗೌಡರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶಾಲೆಯಲ್ಲಿನ ತಮ್ಮ ವಿದ್ಯಾರ್ಥಿ ದಿನಗಳನ್ನು ಮೆಲುಕು ಹಾಕಿದರು. ಹಾಗೆಯೇ ಈ ಸಂದರ್ಭಕ್ಕಾಗಿ ಹೊರತಂದ 'ಸೇವೆಗಾಗಿ ಬಾಳು' ಎಂಬ ಸ್ಮರಣ ಸಂಚಿಕೆಯನ್ನು ಈ ಶಾಖೆಯ ವಿದ್ಯಾರ್ಥಿ ನಾಯಕರಾಗಿದ್ದ ರಾಜ್ಯಸಭಾ ಸದಸ್ಯ, ಅಖಿಲ ಭಾರತ ಕಾಂಗ್ರೆಸ್ ಸಮಿತಿ ಸದಸ್ಯ ಬಿ.ಕೆ. ಹರಿಪ್ರಸಾದ್ ಅವರು ಬಿಡುಗಡೆ ಮಾಡಿ ತಮ್ಮ ಜೀವನದ ಸಾಧನೆಗೆ ಈ ಶಾಖೆಯು ರೂಪಿಸಿದ ವ್ಯಕ್ತಿತ್ವವೇ ಕಾರಣವೆಂದು ಕೃತಜ್ಞತೆ ಸಲ್ಲಿಸಿದರು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷರೂ, ಬೆಂಗಳೂರಿನ ಗೌರವಾನ್ವಿತ ಹಿರಿಯ ವ್ಯಕ್ತಿಗಳೂ ಆದ ಕೆ.ಎಂ. ನಂಜಪ್ಪ ಅಧ್ಯಕ್ಷತೆ ವಹಿಸಿದ್ದರು. ಸೇವಾದಲದ ಕೇಂದ್ರ ಸಮಿತಿ ಅಧ್ಯಕ್ಷ ಎಚ್.ಎನ್. ಗುರುಸಿದ್ಧಸ್ವಾಮಿ ಹಾಗೂ ಕಾರ್ಯದರ್ಶಿ ಯು.ಆರ್. ಸಭಾಪತಿ ಮುಖ್ಯ ಅತಿಥಿಗಳಾಗಿ ಕಾರ್ಯಕ್ರಮದಲ್ಲಿ ಭಾಗವಹಿಸಿ ಈ ಶಾಖೆಯ ಸೇವಾ ಯೋಜನೆಗಳ ಬಗ್ಗೆ ಮೆಚ್ಚುಗೆ ಸೂಚಿಸಿದರು.

ಇದೇ ಸಂದರ್ಭದಲ್ಲಿ ಸೇವಾದಲದ ನಾಯಕರುಗಳಾದ ಎಸ್. ಶೇಖರ್, ರಾಮಪ್ರಕಾಶ್. ರಾಮಕೃಷ್ಣ ಕೌಶಿಕ್, ಚಿಕ್ಕರಂಗೇಗೌಡ, ಉಮಾ ದೀಕ್ಷಿತ್, ಗುರುಪ್ರಸನ್ನ, ಇಂದುಮತಿ ಮತ್ತಿತರರನ್ನು ಸತ್ಕರಿಸಲಾಯಿತು. ನೀಲಿ ಬಿಳಿ ಸಮವಸ್ತ್ರದೊಂದಿಗೆ ಖಾದಿ ಟೋಪಿ ಧರಿಸಿ ಇಡೀ ಕಾರ್ಯಕ್ರಮದುದ್ದಕ್ಕೂ ಶಿಸ್ತಿನಿಂದ ಕುಳಿತ ವಿದ್ಯಾರ್ಥಿಗಳು ಬಂದವರೆಲ್ಲರ ಗಮನ ಸೆಳೆದರು. ಸುಂದರವಾಗಿ ಮೂಡಿ ಬಂದಿರುವ ಸ್ಮರಣ ಸಂಚಿಕೆಯಲ್ಲಿ ಶಾಖೆಯ ಕೆಲವು ವಿದ್ಯಾರ್ಥಿ ವಿದ್ಯಾರ್ಥಿನಿಯರು ಹಿಮಾಲಯ ಪರ್ವತಾರೋಹಿಗಳೂ ಆಗಿರುವ ಚಿತ್ರಗಳು ವಿಶೇಷ ಗಮನ ಸೆಳೆಯುತ್ತವೆ. ಉತ್ತಮ ಚಿಂತನೆಗಳಿಂದ ಕೂಡಿದ ಹಲವಾರು ಲೇಖನಗಳೂ ಹಾಗೂ ವರ್ಣಚಿತ್ರಗಳಿಂದಾಗಿ ಸಂಚಿಕೆ ಸಂಗ್ರಹಯೋಗ್ಯವಾಗಿದೆ. ಹೀಗೆ ಚಿನ್ನದ ಮೆರುಗು ಪಡೆದ ಈ ಶಾಖೆ ಶತಮಾನೋತ್ಸವವನ್ನು ಆಚರಿಸುವಂತಾಗಲಿ ಎಂಬುದೇ ಇದರ ಹಿತೈಷಿಗಳ ಹಾರೈಕೆ.

■ ಮುಗಿಯಿತು

ಈ ಸಂಜೆ

ಬುಧವಾರ 30 ಜುಲೈ 2008

# ಸದಸ್ಯರಾಗಿ ನೇಮಕ



ಬೆಂಗಳೂರು, ಜು.30-ಕೇಂದ್ರ ಆರೋಗ್ಯ ಸಚಿವ ಡಾ. ಅನ್ಬುಮಣಿ ರಾಮದಾಸ್ ಅವರ ಅಧ್ಯಕ್ಷತೆಯಲ್ಲಿ ನಡೆದ ರೆಡ್‌ಕ್ರಾಸ್ ರಾಷ್ಟ್ರೀಯ ಕಾರ್ಯಕಾರಿಣಿ ಸಭೆಯಲ್ಲಿ ರಾಜ್ಯ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಅವರು ಭಾರತೀಯ ಕ್ಷಯರೋಗ ಸಂಸ್ಥೆಯ ಕೇಂದ್ರ ಸಮಿತಿ ಸದಸ್ಯರಾಗಿ ನೇಮಕಗೊಂಡಿದ್ದಾರೆ.

ವಿಜಯ ಕರ್ನಾಟಕ | ಭಾನುವಾರ, 27 ಜುಲೈ, 2008 | ಬೆಂಗಳೂರು

## ನೇಮಕ



ಭಾರತೀಯ ಕ್ಷಯರೋಗ ಸಂಸ್ಥೆ ಕೇಂದ್ರ ಸಮಿತಿ ಸದಸ್ಯರಾಗಿ ರಾಜ್ಯ ರೆಡ್ ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ ನೇಮಕಗೊಂಡಿದ್ದಾರೆ. ಕೇಂದ್ರ ಆರೋಗ್ಯ ಸಚಿವ ಡಾ. ಅನ್ಬುಮಣಿ ರಾಮದಾಸ್ ಅಧ್ಯಕ್ಷತೆಯಲ್ಲಿ ಹೊಸದಿಲ್ಲಿಯಲ್ಲಿ ನಡೆದ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ಕಾರ್ಯಕಾರಿಣಿಯಲ್ಲಿ ಈ ನಿರ್ಣಯ ಕೈಗೊಳ್ಳಲಾಯಿತು ಎಂದು ಪ್ರಕಟಣೆ ತಿಳಿಸಿದೆ.

ಸಂಜೆವಾಣಿ
ಮಂಗಳವಾರ 29 ಜುಲೈ 2008

# ಶೇಷಾದ್ರಿಪುರಂ ಕಾಲೇಜು ಪದವಿ ತರಗತಿ ಉದ್ಘಾಟನೆ

ಬೆಂಗಳೂರು, ಜು. ೨೮- ನಗರದ ಶೇಷಾದ್ರಿಪುರಂ ಕಾಲೇಜಿನ ಪುಸಕ್ತ ಸಾಲಿನ ಪ್ರಥಮ ಪದವಿ ತರಗತಿಗಳ ಉದ್ಘಾಟನಾ ಸಮಾರಂಭ ಜು. 31ರಂದು ಬೆಳಿಗ್ಗೆ 9.30ಕ್ಕೆ ದತ್ತಿಯ ಸಭಾಂಗಣದಲ್ಲಿ ನಡೆಯಲಿದೆ. ವಿಧಾನಪರಿಷತ್ ಸದಸ್ಯ ಡಾ. ದೊಡ್ಡರಂಗೇಗೌಡ ಅವರು ಈ ಕಾರ್ಯಕ್ರಮವನ್ನು ಉದ್ಘಾಟಿಸಲಿದ್ದು, ದತ್ತಿಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಅವರು ಅಧ್ಯಕ್ಷತೆ ವಹಿಸಲಿದ್ದಾರೆ.

ಪ್ರೊಡೇ ಪಿ. ಕೃಷ್ಣ ಅವರು ಮುಖ್ಯ ಅತಿಥಿಗಳಾಗಿ ಕಾರ್ಯಕ್ರಮದಲ್ಲಿ ಭಾಗವಹಿಸಲಿದ್ದಾರೆ.

ವಿಜಯ ಕರ್ನಾಟಕ | ಮಂಗಳವಾರ, 15 ಜುಲೈ 2008 | ಬೆಂಗಳೂರು

# ಜನಕಲ್ಯಾಣ ಕಾರ್ಯಕ್ರಮಗಳಿಗೆ ಆದ್ಯತೆ

ವಿಕ ಸುದ್ದಿಲೋಕ

ಬೆಂಗಳೂರು: ವಿಕಲಚೇತನರ ಕಲ್ಯಾಣ ಕಾರ್ಯಕ್ರಮಗಳು, ರಕ್ತ ನಿಧಿ ಹಾಗೂ ಪ್ರಕೃತಿ ವಿಕೋಪ ತಡೆಗೆ ಸರಕಾರ ಹೆಚ್ಚಿನ ಅನುದಾನ ನೀಡಲಿದೆ ಎಂದು ರಾಜ್ಯಪಾಲ ರಾಮೇಶ್ವರ ಠಾಕೂರ್ ಹೇಳಿದ್ದಾರೆ.

ಕರ್ನಾಟಕ ಆಡಳಿತ ಸೇವೆಯ ಅಧಿಕಾರಿಗಳ ಸಂಶೋಧನಾ ಮತ್ತು ತರ ಬೇತಿ ಕೇಂದ್ರದಲ್ಲಿ ನಡೆದ ರಾಜ್ಯ ರೆಡ್‌ಕ್ರಾಸ್ ಸಂಸ್ಥೆಯ ಸರ್ವ ಸದಸ್ಯರ ಮಹಾಸಭೆಯಲ್ಲಿ ಮಾತನಾಡಿದರು.

ಹಿಂದುಳಿದ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಕಾರ್ಯಕ್ರಮಗಳನ್ನು ರೆಡ್‌ಕ್ರಾಸ್ ಆಯೋಜಿಸಿದಲ್ಲಿ, ಬಡ ಜನರಿಗೆ ನೆರವು ನೀಡಿದಂತಾಗುತ್ತದೆ. ಇಂತಹ ಸಂಸ್ಥೆಗಳೊಂದಿಗೆ ಸಾರ್ವಜನಿಕರು ಕೈಜೋಡಿಸಬೇಕು ಎಂದರು.

ವಿಕ ಚಿತ್ರಲೋಕ




ನಗರದಲ್ಲಿ ಇತ್ತೀಚೆಗೆ ನಡೆದ ರಾಜ್ಯ ರೆಡ್‌ಕ್ರಾಸ್ ಸಂಸ್ಥೆಯ ಸರ್ವ ಸದಸ್ಯರ ಮಹಾಸಭೆಗೆ ಆಗಮಿಸಿದ ರಾಜ್ಯಪಾಲ ರಾಮೇಶ್ವರ ಠಾಕೂರ್ ಅವರನ್ನು ರೆಡ್‌ಕ್ರಾಸ್ ಸಂಸ್ಥೆಯ ವೂಡೆ ಪಿ.ಕೃಷ್ಣ, ರಾಜು ಚಂದ್ರಶೇಖರ್, ಪಿ.ಎನ್. ಶ್ರೀನಿವಾಸಾಚಾರ್ ಆತ್ಮೀಯವಾಗಿ ಬರಮಾಡಿಕೊಂಡರು.

ಸೇವೆ ಎನ್ನುವುದು ಕರ್ತವ್ಯವಾಗಬೇಕು. ಇಂಥ ಸೇವೆಯಿಂದ ಉತ್ತಮ ಸಮಾಜ ನಿರ್ಮಾಣವಾಗುತ್ತದೆ. ಆರೋಗ್ಯ ತಪಾಸಣೆ ಕಾರ್ಯಕ್ರಮಗಳನ್ನು ಗ್ರಾಮಾಂತರ ಪ್ರದೇಶಗಳಲ್ಲೂ ಹಮ್ಮಿಕೊಳ್ಳಬೇಕೆಂದರು.

ರೆಡ್‌ಕ್ರಾಸ್‌ನ ವೂಡೆ ಪಿ.ಕೃಷ್ಣ, ರಾಜು ಚಂದ್ರಶೇಖರ್, ಪಿ.ಎನ್. ಶ್ರೀನಿವಾಸಾಚಾರ್ ಉಪಸ್ಥಿತರಿದ್ದರು.

## ಸುದ್ದಿ ಸಂಕ್ಷೇಪ




ಬೆಂಗಳೂರಿನಲ್ಲಿ ಭಾನುವಾರ ನಡೆದ ಇಂಡಿಯನ್ ರೆಡ್‌ಕ್ರಾಸ್ ಸಂಸ್ಥೆಯ ವಾರ್ಷಿಕ ಸಾಮಾನ್ಯ ಸಭೆಯಲ್ಲಿ ರಾಜ್ಯಪಾಲ ರಾಮೇಶ್ವರ್ ಠಾಕೂರ್ ಅವರು ಅಂಧನೊಬ್ಬನಿಗೆ ವಜೀರ್ ಎನ್ನುವವರು ಸಂಶೋಧಿಸಿದ ವಿದ್ಯುನ್ಮಾನ ಬೆತ್ತವನ್ನು ವಿತರಿಸಿದರು.

ಪ್ರಜಾವಾಣಿ

ಸೋಮವಾರ
14ನೇ ಜುಲೈ 2008

## ಅಂಧರಿಗೆ ಸಾಧನ ವಿತರಣೆ



ರೆಡ್ ಕ್ರಾಸ್ ಸಂಸ್ಥೆ ಭಾನುವಾರ ಬೆಂಗಳೂರಿನಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ರಾಜ್ಯಪಾಲ ರಾಮೇಶ್ವರ ಠಾಕೂರ್ ಅಂಧರಿಗೆ ಅತ್ಯಾಧುನಿಕ ಮಾದರಿಯ ಸಾಧನಗಳನ್ನು ವಿತರಿಸಿದರು. ರಾಜು ಚಂದ್ರಶೇಖರ್, ವೂಡೇ ಪಿ.ಕೃಷ್ಣ, ಡಾ. ಸಿ.ಸೋಮಶೇಖರ್, ಸಾಧನದ ತಯಾರಕ ವಜೀರ್ ಮತ್ತಿತರರು ಉಪಸ್ಥಿತರಿದ್ದರು.

ಉದಯವಾಣಿ 14 ಜುಲೈ 2008




ಬೆಂಗಳೂರಿನಲ್ಲಿ ಭಾನುವಾರ ನಡೆದ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಸರ್ವ ಸದಸ್ಯರ ಸಭೆಗೆ ಆಗಮಿಸಿದ ರಾಜ್ಯಪಾಲ ರಾಮೇಶ್ವರ ಠಾಕೂರ್ ಅವರನ್ನು ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡೆ ಪಿ.ಕೃಷ್ಣ ಸ್ವಾಗತಿಸಿದರು. ರಾಜು ಚಂದ್ರಶೇಖರ್, ಆರೋಗ್ಯ ಇಲಾಖೆ ಆಯುಕ್ತ ಪಿ.ಎನ್. ಶ್ರೀನಿವಾಸಾಚಾರಿ ಉಪಸ್ಥಿತರಿದ್ದರು.

ಸಂಜೆವಾಣಿ ಭಾನುವಾರ 13 ಜುಲೈ 2008



ಕರ್ನಾಟಕ ಆಡಳಿತ ಸೇವೆ ಕಚೇರಿಯಲ್ಲಿ ಭಾರತೀಯ ರೆಡ್‌ಕ್ರಾಸ್ ವಾರ್ಷಿಕ ಸರ್ವ ಸದಸ್ಯಸಭೆಯಲ್ಲಿ ರಾಜ್ಯಪಾಲ ರಾಮೇಶ್ವರ ಠಾಕೂರ್ ಅಂಧರೊಬ್ಬರಿಗೆ ಎಲೆಕ್ಟ್ರಾನಿಕ್ ಊರುಗೋಲು ನೀಡುತ್ತಿದ್ದಾರೆ

ಈ ಸಂಜೆ
ಭಾನುವಾರ, 13 ಜುಲೈ, 2008




ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ನಗರದಲ್ಲಿಂದು ಹಮ್ಮಿಕೊಂಡಿದ್ದ ವಾರ್ಷಿಕ ಸರ್ವ ಸದಸ್ಯರ ಸಭೆಯಲ್ಲಿ ಸಂಸ್ಥೆಯ ಉಪಾಧ್ಯಕ್ಷ ವೂಡೆ ಪಿ.ಕೃಷ್ಣ, ರಾಜ್ಯಪಾಲ ರಾಮೇಶ್ವರ್ ಠಾಕೂರ್ ಅವರಿಗೆ ಪುಷ್ಪ ಗುಚ್ಛ ನೀಡಿ ಸ್ವಾಗತಿಸಿದರು. ಸಂಸ್ಥೆಯ ಖಜಾಂಚಿ ರಾಜುಚಂದ್ರಶೇಖರ್, ಆರೋಗ್ಯ ಇಲಾಖೆ ಆಯುಕ್ತ ಪಿ.ಎನ್. ಶ್ರೀನಿವಾಸಾಚಾರ್ಯ ಮತ್ತಿತರರು ಉಪಸ್ಥಿತರಿದ್ದರು.

# ಇಂದು ಸಂಜೆ

ಭಾನುವಾರ, ಜು.13-2008




ಬೆಂಗಳೂರಿನ ರೆಡ್‌ಕ್ರಾಸ್ ಸಂಸ್ಥೆ ಸಭಾಂಗಣದಲ್ಲಿಂದು ಹಮ್ಮಿಕೊಂಡಿದ್ದ ರಾಜ್ಯ ರೆಡ್‌ಕ್ರಾಸ್ ಸಂಸ್ಥೆಯ ಪದಾಧಿಕಾರಿಗಳು ಸಭೆಗೆ ಆಗಮಿಸಿದ್ದ ರಾಜ್ಯಪಾಲ ರಾಮೇಶ್ವರ ಠಾಕೂರ್‌ರವರಿಗೆ ಹೂ ಗುಚ್ಛ ನೀಡಿ ಗೌರವಿಸಲಾಯಿತು.

DECCAN HERALD

Friday, July 11, 2008

**Fulfilling Peoples Aspirations:** Observing World Population Day - Theme- 'Plan your future, Plan your family to beat poverty and maternal death and to gain Equality', MLA Ashwathnarayana, Indian Red Cross Society Vice Chairman Wooday P Krishna participate, Yavanika, Nrupathunga Road, 10 am.

ಪ್ರಜಾವಾಣಿ

ಶುಕ್ರವಾರ 11ನೇ ಜುಲೈ 2008

**ಎಫ್‌ಪಿಎ-ಇಂಡಿಯಾ ಸಂಸ್ಥೆ:** ಯುವಜನ ಸೇವಾ ಕೇಂದ್ರ, ನೃಪತುಂಗ ರಸ್ತೆ. ವಿಶ್ವ ಜನಸಂಖ್ಯಾ ದಿನಾಚರಣೆ ನಿಮಿತ್ತ ವಿಚಾರ ಸಂಕಿರಣ. ಅತಿಥಿಗಳು- ಶಾಸಕ ಡಾ. ಅಶ್ವತ್ಥನಾರಾಯಣ, ಇಂಡಿಯನ್ ರೆಡ್ ಕ್ರಾಸ್ ಸೊಸೈಟಿಯ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಬೆಂಗಳೂರು ಲಯನ್ಸ್ ಕ್ಲಬ್ (ಕದಂಬ) ಅಧ್ಯಕ್ಷ ಎಸ್.ಸಿ.ಪುಟ್ಟರಾಮಯ್ಯ. ಅಧ್ಯಕ್ಷತೆ- ಸಂಸ್ಥೆಯ ಅಧ್ಯಕ್ಷ ಡಾ. ಸಿ.ಕೆ.ಎ.ಎನ್.ಶಾಸ್ತ್ರಿ. ಬೆಳಿಗ್ಗೆ 10.

11/7/09

# ಉನ್ನತ ಶಿಕ್ಷಣದ ವ್ಯಾಧಿಗೆ ತಜ್ಞರ 'ರಾಮಬಾಣ'

ಬೆಂಗಳೂರು, ಜು. 8– ಬದಲಾಗುತ್ತಿರುವ ಪರಿಸ್ಥಿತಿಗೆ ತಕ್ಕಂತೆ ಪಠ್ಯಕ್ರಮ ಹಾಗೂ ಪರೀಕ್ಷಾ ಪದ್ಧತಿಯಲ್ಲಿ ಸುಧಾರಣೆ ತರಬೇಕು, ಮೂಲವಿಜ್ಞಾನ, ಕಲಾ ವಿಭಾಗಗಳು ಹೆಚ್ಚು ಆಕರ್ಷಣೀಯವಾಗುವಂತೆ ಬದಲಾವಣೆ ಮಾಡಬೇಕು, ಗ್ರಾಮೀಣ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ನೀಡಬೇಕು, ಉನ್ನತ ಶಿಕ್ಷಣಕ್ಕೆ ಸರ್ಕಾರವೇ ಸಾಲ ಸೌಲಭ್ಯ ಒದಗಿಸಬೇಕು, ಶಿಕ್ಷಕರಿಗೂ ಪುನರ್‌ಮನನ ಶಿಕ್ಷಣ ನೀಡಬೇಕು......

ಉನ್ನತ ಶಿಕ್ಷಣದ ಸಮಗ್ರ ಬೆಳವಣಿಗೆ ಸಂಬಂಧ ಮಂಗಳವಾರ ಬೆಂಗಳೂರಿನಲ್ಲಿ ಉನ್ನತ ಶಿಕ್ಷಣ ಸಚಿವ ಅರವಿಂದ ಲಿಂಬಾವಳಿ ಅವರು ಕರೆದಿದ್ದ ಸಭೆಯಲ್ಲಿ ಮಾತನಾಡಿದ ಶಿಕ್ಷಣ ಕ್ಷೇತ್ರದ ತಜ್ಞರು, ವಿಶ್ವವಿದ್ಯಾಲಯದ ಮಾಜಿ ಕುಲಪತಿಗಳು, ಪ್ರಾಧ್ಯಾಪಕರು, ಶಿಕ್ಷಣ ಸಂಸ್ಥೆಗಳನ್ನು ನಡೆಸುವ ಮುಖ್ಯಸ್ಥರು ನೀಡಿದ ಸಲಹೆಗಳಿವು.

ಉನ್ನತ ಶಿಕ್ಷಣ ಕ್ಷೇತ್ರದ ಬೆಳವಣಿಗೆ ಸಂಬಂಧ ಕರೆಯಲಾಗಿದ್ದ ಒಂದು ರೀತಿಯ ಅಪರೂಪದ ಈ ಸಭೆಯಲ್ಲಿ ಪ್ರಸ್ತುತ ಉನ್ನತ ಶಿಕ್ಷಣ ಈಗಿನ ಪರಿಸ್ಥಿತಿಯಲ್ಲಿ ಯಾವ ರೀತಿ ಸುಧಾರಣೆ ಮಾಡಬೇಕು, ಎಲ್ಲಿ ಲೋಪಗಳಿವೆ, ಅವುಗಳನ್ನು ಹೇಗೆ ನಿಭಾಯಿಸಬೇಕು ಬಗ್ಗೆ ಅನೇಕ ರಚನಾತ್ಮಕ ಸಲಹೆ, ಸೂಚನೆಗಳನ್ನು ಶೈಕ್ಷಣಿಕ ತಜ್ಞರು ನೀಡಿದರು.

ಸಭೆಯಲ್ಲಿ ನೀಡಿದ ಪ್ರಮುಖ ಸಲಹೆ, ಸೂಚನೆಗಳು ಈ ರೀತಿ ಇವೆ.

ಕೃ. ನರಹರಿ
ಮಾಜಿ ಶಾಸಕರು

ಮೂಲ ವಿಜ್ಞಾನ ಕೋರ್ಸ್‌ಗಳಿಗೆ ಹೋಗುವ ವಿದ್ಯಾರ್ಥಿಗಳಿಗೆ ವಿಶೇಷ ಉತ್ತೇಜನ ನೀಡಬೇಕು. ಪ್ರಥಮ ಹಾಗೂ ದ್ವಿತೀಯ ಪಿಯುಸಿ ಪರೀಕ್ಷೆಗಳನ್ನು ಆಯಾ ಕಾಲೇಜುಗಳೇ ನಡೆಸಲು ಅವಕಾಶ ನೀಡಬೇಕು. ವಿದ್ಯಾರ್ಥಿಗಳಲ್ಲಿ ಆತ್ಮವಿಶ್ವಾಸ ಮೂಡಿಸುವ ಪಠ್ಯಕ್ರಮ ಅಳವಡಿಸಬೇಕು.



*ಉನ್ನತ ಶಿಕ್ಷಣದ ಸಮಗ್ರ ಬೆಳವಣಿಗೆ ಸಂಬಂಧ ಮಂಗಳವಾರ ಬೆಂಗಳೂರಿನಲ್ಲಿ ಉನ್ನತ ಶಿಕ್ಷಣ ಸಚಿವ ಅರವಿಂದ ಲಿಂಬಾವಳಿ ಅವರು ಕರೆದಿದ್ದ ಸಭೆಯಲ್ಲಿ ಶಿಕ್ಷಣ ಕ್ಷೇತ್ರದ ವಿವಿಧ ಪ್ರತಿನಿಧಿಗಳು ಭಾಗವಹಿಸಿದ್ದರು.*

ಡಾ. ರುದ್ರಯ್ಯ
ಗುಲ್ಬರ್ಗ ವಿ.ವಿ. ಮಾಜಿ ಕುಲಪತಿ

ಮೂಲ ವಿಜ್ಞಾನದ ಬಗ್ಗೆ ಸರಿಯಾದ ಮಾರ್ಗದರ್ಶನ ನೀಡಬೇಕು. ಗ್ರಾಮೀಣ ಭಾಗದಿಂದ ಬಂದ ವಿದ್ಯಾರ್ಥಿಗಳಿಗೆ ಫೆಲೋಶಿಪ್ ಅಥವಾ ಸ್ಕಾಲರ್‌ಶಿಪ್ ಕೊಡಬೇಕು, ಶಿಕ್ಷಕರು ಸೇರಿದಂತೆ ಕಾಲೇಜುಗಳಲ್ಲಿ ಮೂಲಭೂತ ಸೌಲಭ್ಯ ಒದಗಿಸಬೇಕು.

ಡಾ. ಚಂದ್ರಶೇಖರ ಶೆಟ್ಟಿ
ರಾಜೀವ ಗಾಂಧಿ ಆರೋಗ್ಯ ವಿವಿ ಮಾಜಿ ಕುಲಪತಿ

ಉನ್ನತ ಶಿಕ್ಷಣ ಎಲ್ಲರಿಗೂ ಕೈಗೆಟುಕಬೇಕು, ಹೊಸ ಪದ್ಧತಿಗಳ ಅಳವಡಿಕೆ, ವಿಸ್ತರಣೆ ನಡೆಯಬೇಕು.

ಡಾ. ಹನುಮಂತಪ್ಪ
ಬೆಂಗಳೂರು ವಿವಿ ಮಾಜಿ ಕುಲಪತಿ

ಶಿಕ್ಷಣ ಸಂಸ್ಥೆಗಳ ಸಂಖ್ಯೆ ಹೆಚ್ಚಾಗಿದೆ, ಆದರೆ ಗುಣಮಟ್ಟ ಸಂಖ್ಯೆಗೆ ಅನುಗುಣವಾಗಿಲ್ಲ, ನೈತಿಕ, ಮಾನವೀಯ ಹಾಗೂ ತಾತ್ವಿಕವಾದ ಶಿಕ್ಷಣವನ್ನು ನೀಡುತ್ತಿಲ್ಲ, ನಿಜಕ್ಕೂ ಇದು ಅಪಾಯಕಾರಿ ಬೆಳವಣಿಗೆ

ಜಾನ್ ಬಿ. ಕುಟಿನೋ
ಕಾನೂನು ತಜ್ಞ

ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಉನ್ನತ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಬೇಕು. ಪ.ಜಾತಿ, ಪ. ಪಂಗಡ ಹಾಗೂ ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ವಿಶೇಷ ಗಮನ ಕೊಡಬೇಕು. ಆ ಭಾಗದ ವ್ಯವಸ್ಥೆಯನ್ನು ಉತ್ತಮಗೊಳಿಸಬೇಕು. ಆ ಭಾಗದ ವಿದ್ಯಾರ್ಥಿಗಳಿಗೆ ಮಾತನಾಡುವ ಇಂಗ್ಲಿಷ್ ಕಲಿಸಬೇಕು, ಅವರ ಕೌಶಲ್ಯ ಹೆಚ್ಚಿಸಬೇಕು.

ಕಾಲೇಜು ಶಿಕ್ಷಣವನ್ನು ಪುನರ್‌ರಚಿಸಬೇಕು

ಎನ್. ಆರ್. ಶೆಟ್ಟಿ
ಬೆಂಗಳೂರು ವಿವಿ ಮಾಜಿ ಕುಲಪತಿ

ವಿಶ್ವವನ್ನು ಗಮನದಲ್ಲಿಟ್ಟುಕೊಂಡು ಗುಣಮಟ್ಟದ ಶಿಕ್ಷಣವನ್ನು ನೀಡಬೇಕು, ಸಿಬ್ಬಂದಿ ವ್ಯವಸ್ಥೆಯನ್ನು ಉತ್ತಮಗೊಳಿಸಬೇಕು, ವಿಶೇಷವಾದ ವಿಷಯಗಳನ್ನು ಪಂಚಯಿಸಬೇಕು, ಖಾಲಿ ಇರುವ ಶಿಕ್ಷಕರ ಹುದ್ದೆಯನ್ನು ಭರ್ತಿ ಮಾಡಬೇಕು. ಪಠ್ಯಕ್ರಮವನ್ನು ಪುನರ್‌ರಚಿಸಬೇಕು, ಹೊಸ ರೀತಿಯ ಕಾರ್ಯಕ್ರಮ ಅನುಷ್ಠಾನಗೊಳಿಸಬೇಕು. ಶಿಕ್ಷಕರಿಗೆ ಪುನರ್‌ಮನನ ಶಿಕ್ಷಣ ನೀಡಬೇಕು.

ಡಾ. ಬಾಲವೀರರೆಡ್ಡಿ
ಡಾ. ಎಂ. ವಿಶ್ವೇಶ್ವರಯ್ಯ ತಾಂತ್ರಿಕ ವಿವಿ ಮಾಜಿ ಕುಲಪತಿ

ವಿಜ್ಞಾನ, ತಾಂತ್ರಿಕ ವಿಷಯದಲ್ಲಿ ಪ್ರಾಕ್ಟಿಕಲ್‌ಗೆ ಹೆಚ್ಚು ಆದ್ಯತೆ ನೀಡಬೇಕು. ಅನಾವಶ್ಯಕವಾಗಿ ಹೆಚ್ಚೆಚ್ಚು ಪುಸ್ತಕಗಳನ್ನು ಹಾಗೂ ಮೆಟೀರಿಯಲ್‌ಗಳನ್ನು ತುರುಕಲಾಗುತ್ತಿದೆ. ಇದನ್ನು ಕಡಿಮೆ ಮಾಡಬೇಕು. ಹೊಸ ರೀತಿಯ ಪ್ರಶ್ನೆ ಪತ್ರಿಕೆ ಅನುಷ್ಠಾನಗೊಳಿಸಬೇಕು, ಉತ್ತಮ ಶಿಕ್ಷಣ ಸಂಸ್ಥೆಗಳಿಗೆ ಸ್ವಾಯತ್ತತೆ ನೀಡಬೇಕು.

ಪ್ರೊ. ಎಂ.ಆರ್. ದೊರೆಸ್ವಾಮಿ
ಪಿಇಎಸ್ ಶಿಕ್ಷಣ ಸಂಸ್ಥೆ ಸಂಸ್ಥಾಪಕರು

ಬೆಂಗಳೂರು ವಿಶ್ವವಿದ್ಯಾಲಯದ ಹೊರೆ ಕಡಿಮೆ ಮಾಡಲು ಸಣ್ಣ ಸಣ್ಣ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಿ. ಒಂದು ವಿವಿಗೆ 200 ಕಾಲೇಜುಗಳನ್ನು ಮಾತ್ರ ನೀಡಬೇಕು. ಪದವಿ ಶಿಕ್ಷಣದಲ್ಲಿ ಇರುವ 'ಕಾಂಬಿನೇಷನ್' ಪುನರ್ ರಚಿಸಬೇಕು.

ಪ್ರಥಮ ವರ್ಷದಲ್ಲಿ ವಾರ್ಷಿಕ ಪದ್ಧತಿ ಹಾಗೂ ಎರಡು ಮತ್ತು ಮೂರನೇ ವರ್ಷದಲ್ಲಿ ಸೆಮಿಸ್ಟರ್ ಪದ್ಧತಿ ಜಾರಿಗೆ ತರಬೇಕು. ಮೌಲ್ಯಮಾಪನ ಮಾಡುವ ಎಲ್ಲರಿಗೂ ಸಂಭಾವನೆ ನೀಡಬೇಕು.

ಪ್ರೊ. ಪಿ. ಕೃಷ್ಣ

ಉನ್ನತ ಶಿಕ್ಷಣ ಪಡೆಯಲು ಸರ್ಕಾರವೇ ಸಾಲ ಸೌಲಭ್ಯ ನೀಡಬೇಕು. ಎಸ್ಸೆಸ್ಸೆಲ್ಸಿಯಿಂದ ಪಿಯುಸಿಗೆ ಬರುವ ವಿದ್ಯಾರ್ಥಿಗಳಿಗೆ ವಿಶೇಷವಾದ 'ಬ್ರಿಡ್ಜ್ ಕೋರ್ಸ್' ಏರ್ಪಡಿಸಬೇಕು. ಸಿಬ್ಬಂದಿ ವ್ಯವಸ್ಥೆಯನ್ನು ಉತ್ತಮಗೊಳಿಸಬೇಕು. ಕಾಲೇಜುಗಳಲ್ಲಿ ಪಾಠ ಮಾಡಲು ಬರುವವರಿಗೆ ಕನಿಷ್ಠ ಮೂರು ತಿಂಗಳ ತರಬೇತಿ ನೀಡಬೇಕು.

ಪಿ.ವಿ. ಕೃಷ್ಣಭಟ್
ಶಿಕ್ಷಣ ತಜ್ಞರು

ಸಾಮಾನ್ಯ ಪದವಿಯನ್ನು ಸಂಪೂರ್ಣವಾಗಿ ಪುನರ್‌ರಚಿಸಬೇಕು, ಸರ್ಕಾರಿ ಕಾಲೇಜುಗಳಿಗೆ ಮೂಲಭೂತ ಸೌಲಭ್ಯ ಒದಗಿಸಬೇಕು. ಉನ್ನತ ಶಿಕ್ಷಣಕ್ಕೆ ಹೆಚ್ಚು ಹಣ ಒದಗಿಸಬೇಕು.

ಪ್ರೊ. ಕೆ.ಇ. ರಾಧಾಕೃಷ್ಣ
ಸುರಾನಾ ಕಾಲೇಜ್ ನಿವೃತ್ತ ಪ್ರಾಂಶುಪಾಲರು

ಸೆಮಿಸ್ಟರ್ ಪದ್ಧತಿಯ ಬಗ್ಗೆ ಮರು ಚಿಂತನೆ ಮಾಡಬೇಕು

ಮುತ್ತಮ್ಮ
ಶಿಕ್ಷಣ ತಜ್ಞರು

ಯಾವುದೇ ಭೇದ ಮಾಡದೇ ಎಲ್ಲ ಕಾಲೇಜಿನ ಹೆಣ್ಣುಮಕ್ಕಳಿಗೆ ಉಚಿತ ಶಿಕ್ಷಣ ನೀಡಬೇಕು, ದೈಹಿಕ ಮತ್ತು ಯೋಗದ ಬಗ್ಗೆ ಶಿಕ್ಷಣ ನೀಡಬೇಕು

ಪ್ರೊ. ಲೋಕೇಶ್
ಶಿಕ್ಷಕ ಸಂಘದ ಪ್ರತಿನಿಧಿ

ಉನ್ನತ ಶಿಕ್ಷಣಕ್ಕೆ ಪ್ರತ್ಯೇಕ ಮಂಡಳಿ ಸ್ಥಾಪಿಸಬೇಕು. ಉನ್ನತ ಶಿಕ್ಷಣ ಕುರಿತಂತೆ ಕಾರ್ಯಪಡೆ ಈ ಹಿಂದೆ ನೀಡಿರುವ ವರದಿಯ ಶಿಫಾರಸುಗಳನ್ನು ಜಾರಿಗೆ ತನ್ನಿ. ವಿಶ್ವವಿದ್ಯಾಲಯಗಳನ್ನು ವಿದ್ಯಾರ್ಥಿಗಳ ಸಂಖ್ಯೆಯ ಮೇಲೆ ಸ್ಥಾಪಿಸಿ

ಎಂ.ಕೆ. ಶ್ರೀಧರ
ಶಿಕ್ಷಣ ತಜ್ಞ

ವಿಶ್ವವಿದ್ಯಾಲಯಗಳ ವ್ಯವಸ್ಥೆಯನ್ನು ಪುನರ್ ರಚಿಸಬೇಕು. ರಾಜ್ಯ ಮಟ್ಟದ ಪರೀಕ್ಷಾ ಪ್ರಾಧಿಕಾರ ರಚಿಸಬೇಕು. ಕೈಗಾರಿಕೋದ್ಯಮಿಗಳನ್ನು ಶಿಕ್ಷಣ ಕ್ಷೇತ್ರದಲ್ಲಿ ಪಾಲ್ಗೊಳ್ಳುವಂತೆ ಮಾಡಬೇಕು.

ಭಾಗ್ಯಲಕ್ಷ್ಮಿ
ಶಿಕ್ಷಣ ತಜ್ಞರು

ಮಾರುಕಟ್ಟೆಗೆ ಅನುಗುಣವಾಗಿ ಬಿಎ. ಬಿಎಸ್ಸಿ ಶಿಕ್ಷಣ ಪದ್ಧತಿಯನ್ನು ಪುನರ್‌ರಚಿಸಬೇಕು. ಸರ್ಕಾರಿ ಕಾಲೇಜುಗಳಲ್ಲಿ ಕ್ರೀಡಾ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಲು ವಿಶೇಷವಾದ ಸಹಾಯಧನ ನೀಡಬೇಕು.

ರಾಮಚಂದ್ರ ಕೋಟೆಮನೆ
ಸಂಸ್ಕೃತ ವಿದ್ವಾನ

ಸಂಸ್ಕೃತಕ್ಕಾಗಿ ಪ್ರತ್ಯೇಕ ವಿಶ್ವವಿದ್ಯಾಲಯ ಸ್ಥಾಪಿಸಬೇಕು

ಚೂಡಾಮಣಿ
ಪ್ರಾಧ್ಯಾಪಕರು

ಕಾಲೇಜುಗಳಲ್ಲಿ ಸಂಸ್ಕೃತಿಯ ಅಧ್ಯಯನಕ್ಕೆ ಒತ್ತು ನೀಡಬೇಕು

ಟೈಮ್ಸ್ ಸಿಟಿ

ದಿ ಟೈಮ್ಸ್ ಆಫ್ ಇಂಡಿಯಾ, ಬೆಂಗಳೂರು, ಬುಧವಾರ, ಜುಲೈ 9, 2008


# ಉನ್ನತ ಶಿಕ್ಷಣದ ಗುಣಮಟ್ಟ ಹೆಚ್ಚಿಸಲು ರಾಜ್ಯ ಜ್ಞಾನ ಆಯೋಗ



ಉನ್ನತ ಶಿಕ್ಷಣ ಸಚಿವ ಅರವಿಂದ ಲಿಂಬಾವಳಿ ಮಂಗಳವಾರ ನಡೆಸಿದ ಶಿಕ್ಷಣ ಕ್ಷೇತ್ರದ ಪ್ರತಿನಿಧಿಗಳು, ತಜ್ಞರ ಸಭೆಯಲ್ಲಿ ಕಾಲೇಜು ಶಿಕ್ಷಣ ನಿರ್ದೇಶನಾಲಯದ ಆಯುಕ್ತ ಮಹೇಂದ್ರ ಜೈನ್, ಶಿಕ್ಷಣ ತಜ್ಞ ಗುರುರಾಜ ಕರ್ಜಗಿ ಮತ್ತಿತರರು.

ಬೆಂಗಳೂರು: ಉನ್ನತ ಶಿಕ್ಷಣದ ಗುಣಮಟ್ಟ ಹೆಚ್ಚಿಸಲು ಹಾಗೂ ಅಗತ್ಯ ಸುಧಾರಣೆ ತರಲು ಶೀಘ್ರದಲ್ಲಿಯೇ ಉನ್ನತ ಸಮಿತಿ ಹಾಗೂ ರಾಜ್ಯ ಜ್ಞಾನ ಆಯೋಗ ರಚಿಸುವುದಾಗಿ ಉನ್ನತ ಶಿಕ್ಷಣ ಸಚಿವ ಅರವಿಂದ ಲಿಂಬಾವಳಿ ತಿಳಿಸಿದ್ದಾರೆ.

ಉನ್ನತ ಶಿಕ್ಷಣ ಹೆಚ್ಚು ಪ್ರಸ್ತುತವಾಗಲು, ಉತ್ಕೃಷ್ಟತೆ ಪಡೆಯಲು ಮಾಡಬೇಕಿರುವ ಸುಧಾರಣೆಗಳು, ಬದಲಾವಣೆಗಳ ಬಗ್ಗೆ ಚರ್ಚಿಸಲು ಮಂಗಳವಾರ ಕರೆಯಲಾಗಿದ್ದ ಶಿಕ್ಷಣ ಕ್ಷೇತ್ರದ ಪ್ರತಿನಿಧಿಗಳ ಸಭೆಯಲ್ಲಿ ಅವರು ಮಾತನಾಡಿದರು.

ಸಮಿತಿ ಹಾಗೂ ಆಯೋಗಗಳು ನೀಡುವ ಸಲಹೆಯ ಅನುಷ್ಠಾನಕ್ಕೆ ಕಾಲಮಿತಿ ಹಾಕಿಕೊಳ್ಳಲಾಗುವುದು. ಸೆಮಿಸ್ಟರ್ ಪದ್ಧತಿಯ ಬಗ್ಗೆ ಇರುವ ಪರ ವಿರೋಧದ ಅಭಿಪ್ರಾಯಗಳನ್ನು ಆಧರಿಸಿ ಸೂಕ್ತ ವ್ಯವಸ್ಥೆಯನ್ನು ಶಿಫಾರಸ್ಸು ಮಾಡಲು ಅಧ್ಯಯನ ಸಮಿತಿ ನೇಮಿಸಲಾಗುವುದು ಎಂದು ತಿಳಿಸಿದರು.

ಎರಡು ಕೇಂದ್ರೀಯ ವಿಶ್ವವಿದ್ಯಾಲಯಗಳು: ರಾಜ್ಯದ ಉನ್ನತ ಶಿಕ್ಷಣ ಕ್ಷೇತ್ರವನ್ನು ಬಲಪಡಿಸುವ ಉದ್ದೇಶ ಕೇಂದ್ರ ಸರ್ಕಾರಕ್ಕಿದೆ. ಗುಲ್ಬರ್ಗಾ ಹಾಗೂ ಮೈಸೂರು ಗಳಲ್ಲಿ 2 ಕೇಂದ್ರೀಯ ವಿಶ್ವವಿದ್ಯಾಲಯ ಗಳನ್ನು ಸ್ಥಾಪಿಸಲು ವಿವಿ ಅನುದಾನ ಆಯೋಗ (ಯುಜಿಸಿ) ನಿರ್ಧರಿಸಿದೆ ಎಂದು ಸಚಿವರು ತಿಳಿಸಿದರು.

ಐಐಟಿಯೂ ಸೇರಿದಂತೆ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳನ್ನು ರಾಜ್ಯದಲ್ಲಿ ಸ್ಥಾಪಿಸಲು ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗುವುದು ಎಂದು ಭರವಸೆ ನೀಡಿದರು.

ಉನ್ನತ ಶಿಕ್ಷಣವನ್ನು ಹೆಚ್ಚು ಗುಣಾತ್ಮಕ ಹಾಗೂ ರಚನಾತ್ಮಕಗೊಳಿಸಲು ರಾಜ್ಯದ ವಿವಿಧ ಶಿಕ್ಷಣ ಕ್ಷೇತ್ರಗಳ ಪ್ರತಿನಿಧಿಗಳ ಸಭೆ ನಡೆಸಲಾಗುವುದು. ಮಂಗಳೂರು, ಹುಬ್ಬಳ್ಳಿ, ಗುಲ್ಬರ್ಗಾ, ಮೈಸೂರು ಸೇರಿದಂತೆ ರಾಜ್ಯದ ವಿವಿಧ ಭಾಗಗಳಲ್ಲಿ ಸ್ಥಳೀಯ ಶೈಕ್ಷಣಿಕ ಸಂಸ್ಥೆಗಳ ಆಡಳಿತ ಮಂಡಳಿ ಪ್ರತಿನಿಧಿಗಳು, ಶಿಕ್ಷಣ ತಜ್ಞರು, ಅಧಿಕಾರಿಗಳು, ವಿದ್ಯಾರ್ಥಿ ಸಂಘಟನೆಗಳ ಪ್ರತಿನಿಧಿಗಳ ಜತೆ ಸಭೆ ನಡೆಯಲಿದೆ ಎಂದರು.

ಐಐಎಂ-ಬೆಂಗಳೂರು ನಿರ್ದೇಶಕ ಪಂಕಜ್ ಚಂದ್ರ, ಸಾಮಾಜಿಕ ಹಾಗೂ ವೈಜ್ಞಾನಿಕ ಚಿಂತಕರನ್ನು ರೂಪಿಸುವುದು ಉನ್ನತ ಶಿಕ್ಷಣದ ಆದ್ಯತೆಯಾಗಬೇಕು. ಜ್ಞಾನವರ್ಧನೆ ಹಾಗೂ ಸಂಶೋಧನೆ ಪ್ರಾಶಸ್ತ್ಯ ಪಡೆಯಬೇಕು. ಶೈಕ್ಷಣಿಕ ಸಂಸ್ಥೆಗಳಿಗೆ ಆಡಳಿತಾತ್ಮಕ ಹಾಗೂ ಆರ್ಥಿಕ ಸ್ವಾಯತ್ತತೆ ಲಭ್ಯವಾದಾಗ ಉತ್ತಮ ಬದಲಾವಣೆ ಸಾಧ್ಯ ಎಂದರು.

## ಆರ್ ಅಂಡ್ ಡಿ ಗೆ ಒತ್ತಾಯ

ಬೆಂಗಳೂರು: 'ನಿಮಗೆ ಫಸ್ಟ್ ಕ್ಲಾಸ್ ಅಥವಾ ಡಿಸ್ಟಿಂಕ್ಷನ್ ಬೇಕೆ? ಹಾಗಾದರೆ ಬಿಎಡ್ ಸೇರಿ'

ಇಂತಹದೊಂದು ಘೋಷಣೆ ಮಂಗಳವಾರ ಉನ್ನತ ಶಿಕ್ಷಣ ಸಚಿವರು ನಡೆಸಿದ ಶಿಕ್ಷಣದ ಕ್ಷೇತ್ರದ ಪ್ರತಿನಿಧಿಗಳ ಸಭೆಯಲ್ಲಿ ಕೇಳಿ ಬಂದಿತು.

ಆ ಮೂಲಕ, ರಾಜ್ಯಾದ್ಯಂತ ನಾಯಿಕೊಡೆಗಳಂತೆ ತಲೆ ಎತ್ತಿರುವ ಬಿಎಡ್ ಕಾಲೇಜುಗಳ ಬಗ್ಗೆ ಶಿಕ್ಷಣ ಕ್ಷೇತ್ರದ ಪ್ರತಿನಿಧಿಗಳ ಸಭೆಯಲ್ಲಿ ತೀವ್ರ ಅಸಮಾಧಾನ ವ್ಯಕ್ತವಾಯಿತು.

ಒಂದೇ ವರ್ಷದಲ್ಲಿ ಸುಮಾರು 300 ಬಿಎಡ್ ಕಾಲೇಜುಗಳಿಗೆ ಅನುಮತಿ ನೀಡುವ ಮೂಲಕ ಸರ್ಕಾರ ಎಡವಿದೆ. ಮೂಲಸೌಕರ್ಯವಿಲ್ಲದ, ಉಪನ್ಯಾಸಕರೇ ಇಲ್ಲದ ಸಂಸ್ಥೆಗಳಿಗೆಲ್ಲಾ ಬಿಎಡ್ ಕಾಲೇಜು ಸ್ಥಾಪಿಸಲು ಅನುಮತಿ ನೀಡಲಾಗಿದೆ ಎಂದು ಪ್ರತಿನಿಧಿಯೊಬ್ಬರು ಹೇಳಿದರು.

ಸಭೆಯಲ್ಲಿದ್ದ ಇತರರೂ ಇದಕ್ಕೆ ಸಮ್ಮತಿ ಸೂಚಿಸಿದರು. ಶಿಕ್ಷಣ ಕ್ಷೇತ್ರದಲ್ಲಿ ರಾಷ್ಟ್ರದ ದೃಷ್ಟಿಕೋನ, ನಿಲುವೇನು ಎನ್ನುವ ಬಗ್ಗೆ ಚಿಂತನೆ ಅಗತ್ಯವಿದ್ದು, ಸಂಶೋಧನೆ ಮತ್ತು ಅಭಿವೃದ್ಧಿ (ಆರ್ ಅಂಡ್ ಡಿ) ವಿಭಾಗ ಸ್ಥಾಪಿಸಬೇಕು. ಆಗ ಪರಿಸ್ಥಿತಿ ಸುಧಾರಿಸುತ್ತದೆ ಎಂಬ ಅಭಿಪ್ರಾಯ ಸಭೆಯಲ್ಲಿ ಮೂಡಿತು.

## ಮೌಲಿಕ ಬದಲಾವಣೆಗಾಗಿ ಸಲಹೆಗಳು

### ವಿಜ್ಞಾನ ಮತ್ತು ಕಲಾ ಶಿಕ್ಷಣ

ವಿಜ್ಞಾನ ಶಿಕ್ಷಣ ಅಧ್ಯಯಿಸುವರಿಗೆ ಧನಸಹಾಯವೂ ಸೇರಿದಂತೆ ಪ್ರೋತ್ಸಾಹಕ ಕ್ರಮಗಳನ್ನು ಸರ್ಕಾರ ಪ್ರಕಟಿಸಬೇಕು

ಶಿಕ್ಷಣ ತಜ್ಞ ವರಹಾ

ಬಹುರಾಷ್ಟ್ರೀಯ ಸಂಸ್ಥೆಗಳು, ಕೈಗಾರಿಕೆಗಳು, ಸಂಘ ಸಂಸ್ಥೆಗಳೊಟ್ಟಿಗೆ ಸರ್ಕಾರ ಮಾತುಕತೆ ನಡೆಸಿ ಅಲ್ಲಿ ಈ ವಿಭಾಗದ ವಿದ್ಯಾರ್ಥಿಗಳಿಗೆ ಹೆಚ್ಚು ಅವಕಾಶ ಕಲ್ಪಿಸಲು ಮುಂದಾಗಬೇಕು

ಉಪನ್ಯಾಸಕರು

### ಸೆಮಿಸ್ಟರ್ ಪರ ವಿರೋಧ

ಮೊದಲೊಂದು ವರ್ಷ ವಾರ್ಷಿಕ ಪರೀಕ್ಷೆ ಅನಂತರ ಸೆಮಿಸ್ಟರ್ ಪರೀಕ್ಷೆ ನಡೆಸಿದರೆ ವಿದ್ಯಾರ್ಥಿಗಳ ಕಲಿಕೆಗೆ ಹೆಚ್ಚಿನ ಉಪಯೋಗ

ಶಿಕ್ಷಣ ತಜ್ಞ ದೊರೆಸ್ವಾಮಿ

ಉಪನ್ಯಾಸಕರ ಉಪನ್ಯಾಸದ ಗುಣಮಟ್ಟ ಹಾಗೂ ಸಂಖ್ಯೆ ಹೆಚ್ಚಿದ್ದರೆ ಸೆಮಿಸ್ಟರ್ ಪದ್ಧತಿ ಉತ್ತಮ, ಹಾಗಿಲ್ಲದೆ ಇದ್ದಾಗ ವಾರ್ಷಿಕ ಪದ್ಧತಿ ಯೋಚಿಸಬಹುದಾದ ಆಯ್ಕೆ

ಪ್ರೊ.ಕೆ.ಇ.ರಾಧಾಕೃಷ್ಣ

ಮೊದಲ ಎರಡು ವರ್ಷದ ಪರೀಕ್ಷೆಗಳನ್ನು ಕಾಲೇಜು ಮಟ್ಟದಲ್ಲಿ ನಡೆಸಬೇಕು, ಅಂತಿಮ ವರ್ಷದ ಪರೀಕ್ಷೆಯನ್ನು ಸಾರ್ವಜನಿಕ ಪರೀಕ್ಷೆಯಾಗಿಸಬೇಕು

ಉಪನ್ಯಾಸಕರು

### ಪ್ರಾಯೋಗಿಕ ರಚನಾತ್ಮಕ ಶಿಕ್ಷಣ

ಪ್ರಾಯೋಗಿಕ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡುವುದರಿಂದ ವಿಜ್ಞಾನ ವಿಷಯಗಳಲ್ಲಿ ಉತ್ತಮ ಪ್ರಗತಿ ಸಾಧ್ಯ. ಪ್ರಾಯೋಗಿಕ ಪರೀಕ್ಷೆಗಳನ್ನು ಈಗಿನ 10 ಅಂಕಗಳಿಂದ 30 ಅಂಕಗಳಿಗೆ ಹೆಚ್ಚಿಸಬೇಕು. ಆಬ್ಜೆಕ್ಟಿವ್ ಪ್ರಶ್ನೆಗಳನ್ನು 50 ಅಂಕಗಳಿಗೆ ಹೆಚ್ಚಿಸಬೇಕು. ಆಗ ವಿದ್ಯಾರ್ಥಿಗಳನ್ನು ಆಲೋಚನೆಗೆ ಹಚ್ಚಲು ಸಾಧ್ಯ

ಬಾಲವೀರ ರೆಡ್ಡಿ
ವಿಟಿಯು ವಿಶ್ರಾಂತ ಕುಲಪತಿ

### ಪರೀಕ್ಷಾ ನಿರ್ವಹಣೆಗೆ ಸಂಸ್ಥೆ

ರಾಜ್ಯದ ವಿವಿಧ ವಿವಿಗಳ ಪರೀಕ್ಷೆ, ಮೌಲ್ಯಮಾಪನ ನಡೆಸಲು ಪ್ರತ್ಯೇಕ ಸಂಸ್ಥೆ ರಚನೆಯಾಗಬೇಕು.

ರಾಷ್ಟ್ರೀಯ ಜ್ಞಾನ ಆಯೋಗದ ಮಾದರಿಯಲ್ಲಿ ರಾಜ್ಯ ಜ್ಞಾನ ಆಯೋಗ ರಚಿಸಬೇಕು.

ಡಾ.ಶ್ರೀಧರ್, ಶಿಕ್ಷಣ ತಜ್ಞ

ಎಲ್ಲ ವಿವಿಗಳಿಗೂ ಒಂದೇ ವೇಳಾಪಟ್ಟಿ ಇರಬೇಕು

ರವೀಂದ್ರ ರೇಷ್ಮೆ

### ಉಪನ್ಯಾಸಕರಿಗೂ ಕೋರ್ಸ್

ಉಪನ್ಯಾಸಕ ವೃತ್ತಿಯೆಡೆಗೆ ಪ್ರತಿಭಾವಂತರನ್ನು ಆಕರ್ಷಿಸುವ ಕೆಲಸವಾಗಬೇಕು. ಉಪನ್ಯಾಸಕರನ್ನು ರೂಪಿಸುವ ಬಗ್ಗೆ ಗಮನಹರಿಸಬೇಕು

ವಿಶ್ರಾಂತ ಕುಲಪತಿ ಎಸ್.ಆರ್.ಶೆಟ್ಟಿ

### ವಿದ್ಯಾರ್ಥಿಗಳ ಸಂಖ್ಯೆ ಆಧರಿಸಿ ವಿವಿ

ವಿವಿಗಳ ಸ್ಥಾಪನೆಗೆ ಕಾಲೇಜುಗಳ ಸಂಖ್ಯೆ ಗಣನೆಗೆ ತೆಗೆದುಕೊಳ್ಳದೆ ವಿದ್ಯಾರ್ಥಿಗಳ ಸಂಖ್ಯೆ ಪರಿಗಣಿಸಬೇಕು.

### ಬೆಂಗಳೂರು ವಿವಿ ಪ್ರತ್ಯೇಕಿಸಿ

ಬೆಂಗಳೂರು ವಿವಿಯನ್ನು ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ, ಕೇಂದ್ರ ವಲಯಗಳಾಗಿ ವಿಭಾಗಿಸಿ ಕಾರ್ಯಭಾರ ಸುಗಮಗೊಳಿಸಬೇಕು. ಅಥವಾ ಪ್ರತ್ಯೇಕ ವಿವಿಗಳನ್ನಾಗಿಯೇ ಮಾಡಬೇಕು.

### ವಿದ್ಯಾರ್ಥಿ ಸಂಗತಿ

- ಸಿಂಡಿಕೇಟ್ ಮತ್ತು ಕೌನ್ಸಿಲ್‌ಗಳಲ್ಲಿ ವಿದ್ಯಾರ್ಥಿ ಪ್ರತಿನಿಧಿಗಳಿಗೆ ಪ್ರಾತಿನಿಧ್ಯ ಕಲ್ಪಿಸಬೇಕು.
- ಶಿಕ್ಷಣಕ್ಕೆ ಸಂಬಂಧಿಸಿದ ನೀತಿ ನಿಯಮ ರೂಪಿಸುವಾಗ ವಿದ್ಯಾರ್ಥಿಗಳ ಅಭಿಪ್ರಾಯ ಪರಿಗಣಿಸಬೇಕು.
- 2000ನೇ ಇಸವಿಯ ವಿವಿ ಕಾಯಿದೆಗೆ ತಿದ್ದುಪಡಿ ತರಬೇಕು.
- ಸೀಟು ಹಂಚಿಕೆ ಕುರಿತು ನಿಖರ ಶಾಸನ ಪಡೆದ ಕಾಲೇಜುಗಳಲ್ಲಿ ಪ್ರವೇಶವನ್ನು ಸೀಟ್ ಕೌನ್ಸೆಲಿಂಗ್ ಮಾದರಿಯಲ್ಲಿ ಕೇಂದ್ರೀಕೃತಗೊಳಿಸಬೇಕು.
- ಡೊನೇಷನ್ ಹಾವಳಿ ತಡೆಗಟ್ಟಬೇಕು.

- ವಿದ್ಯಾರ್ಥಿ ಸಂಘಟನೆಗಳು

# ಶಿಕ್ಷಣ ಕ್ಷೇತ್ರ ಅಭಿವೃದ್ಧಿಗೆ ಜ್ಞಾನ ಆಯೋಗ

ಪ್ರಜಾವಾಣಿ ವಾರ್ತೆ

...ರು: ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಆಗಬೇಕಾದ ಸುಧಾರಣೆಗಳು ಮತ್ತು ಸಮಸ್ಯೆಗಳ ನಿವಾರಣೆ ಸಂಬಂಧ ಸಲಹೆ ಸೂಚನೆಗಳನ್ನು ನೀಡುವುದಕ್ಕಾಗಿ ಶಿಕ್ಷಣ ಕ್ಷೇತ್ರದ ಪ್ರತಿನಿಧಿಗಳನ್ನು ಒಳಗೊಂಡ ರಾಜ್ಯ ಮಟ್ಟದ ಜ್ಞಾನ ಆಯೋಗವನ್ನು ರಚಿಸಲಾಗುವುದು ಎಂದು ಉನ್ನತ ಶಿಕ್ಷಣ ಸಚಿವ ಅರವಿಂದ ಲಿಂಬಾವಳಿ ತಿಳಿಸಿದರು.

ಮಂಗಳವಾರ ಇಲ್ಲಿ ನಡೆದ 'ಶಿಕ್ಷಣ ಪ್ರತಿನಿಧಿಗಳ ಸಭೆ'ಯಲ್ಲಿ ವ್ಯಕ್ತವಾದ ಅಭಿಪ್ರಾಯಗಳನ್ನು ಆಲಿಸಿದ ನಂತರ ಈ ವಿಷಯವನ್ನು ಪ್ರಕಟಿಸಿದರು.

ಅಲ್ಲದೇ, ಇಂದಿನ ಸಭೆಯಲ್ಲಿ ವ್ಯಕ್ತವಾಗಿರುವ ಅಂಶಗಳ ಬಗ್ಗೆ ಅವಲೋಕನ ನಡೆಸಲು 'ಉಪ ಸಮಿತಿ'ಯೊಂದನ್ನು ರಚಿಸಲಾಗುವುದು. ಪರೀಕ್ಷಾ ಸುಧಾರಣೆ ಬಗ್ಗೆ ಪರಿಶೀಲಿಸಲು 'ಅಧ್ಯಯನ ಸಮಿತಿ'ಯೊಂದನ್ನು ರಚಿಸಲಾಗುವುದು. ಸಮಿತಿಯು ಸೆಮಿಸ್ಟರ್ ಪದ್ಧತಿ, ವಾರ್ಷಿಕ ಪದ್ಧತಿ, ತರಗತಿ ಪರೀಕ್ಷಾ ಪದ್ಧತಿಗಳಲ್ಲಿ ಯಾವುದನ್ನು ಅಳವಡಿಸಿಕೊಂಡರೆ ಸೂಕ್ತ ಎಂಬ ಬಗ್ಗೆ ಅಧ್ಯಯನ ನಡೆಸಿ ವರದಿ ನೀಡಲಿದೆ. ಆ ನಂತರ ...ಗ್ಗೆ ಅಂತಿಮ ನಿರ್ಧಾರ ತೆಗೆದುಕೊಳ್ಳುತ್ತೇವೆ ...ಳಿ ಅವರು ತಿಳಿಸಿದರು.

ಪದವಿ ಹಂತದಲ್ಲಿ ವಿಜ್ಞಾನ ವಿಭಾಗವೂ ಸೇರಿದಂತೆ ಈಚೆಗೆ ವಿವಿಧ ವಿಭಾಗಗಳಿಗೆ ಬರುವ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆಯಾಗುತ್ತಿದೆ. ವಿಜ್ಞಾನ ವಿಭಾಗಕ್ಕೆ ವಿದ್ಯಾರ್ಥಿಗಳನ್ನು ಆಕರ್ಷಿಸಲು ಹಾಗೂ ಅಧ್ಯಾಪಕ ವೃಂದವನ್ನು ಬಲಪಡಿಸಲು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಸಲಹೆಗಳನ್ನು ನೀಡಲು ಉನ್ನತ ಮಟ್ಟದ ಸಮಿತಿ ರಚಿಸಲಾಗುವುದು. ಈಗಿರುವ ವ್ಯವಸ್ಥೆಯಲ್ಲಿನ ದೋಷಗಳನ್ನೂ ಸಮಿತಿ ಪತ್ತೆಹಚ್ಚಲಿದೆ ಎಂದು ಅಧ್ಯಯನ ನಡೆಸಲಿದೆ ಎಂದರು.

ಈಗಿನ ಶಿಕ್ಷಣ ವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ತಂದರೆ ಕರ್ನಾಟಕ ದೇಶದಲ್ಲಿಯೇ ನಂ.1 ರಾಜ್ಯವಾಗುವುದರಲ್ಲಿ ಸಂಶಯವಿಲ್ಲ. ಆದರೆ ವ್ಯವಸ್ಥೆ ಅದಕ್ಕೆ ಅವಕಾಶ ಮಾಡಿಕೊಡುತ್ತದೆಯೇ ಎಂಬುದು ನಮ್ಮ ಮುಂದಿರುವ ಪ್ರಶ್ನೆ. ಈ ನಿಟ್ಟಿನಲ್ಲಿ ಹೋರಾಟ ಮಾಡಿಯಾದರೂ ಜಾರಿ ಮಾಡುತ್ತೇವೆ. ಗುಣಮಟ್ಟದಲ್ಲಿ ರಾಜಿ ಪ್ರಶ್ನೆಯೇ ಇಲ್ಲ. ಇಂತಹ ಸಭೆಗಳನ್ನು ನಿರಂತರವಾಗಿ ನಡೆಸಿ ಸಲಹೆಗಳನ್ನು ಪಡೆದುಕೊಳ್ಳಲಾಗುವುದು ಎಂದು ತಿಳಿಸಿದರು.

ಸಮಿತಿಗಳು ಶೀಘ್ರ ರಚನೆಯಾಗಲಿದ್ದು, ತಮಗೆ ವಹಿಸಿರುವ ಜವಾಬ್ದಾರಿಗಳನ್ನು ಸಮರ್ಪಕವಾಗಿ ನಿಭಾಯಿಸಿ ವರದಿ ನೀಡುತ್ತವೆ ಎಂಬ ವಿಶ್ವಾಸವಿದೆ. ಉಪ ಸಮಿತಿ ನೀಡುವ ವರದಿಯ ಬಗ್ಗೆ ಅಧಿಕಾರಿಗಳೊಂದಿಗೆ ಚರ್ಚಿಸಿ ಉನ್ನತ ಶಿಕ್ಷಣದ ಅಭಿವೃದ್ಧಿಗೆ ಪ್ರಯತ್ನಿಸುತ್ತೇವೆ. ಮುಂದಿನ ದಿನಗಳಲ್ಲಿ ಮೈಸೂರು, ಗುಲ್ಬರ್ಗ, ಮಂಗಳೂರಿನಲ್ಲಿ ಸಮಾಲೋಚನಾ ಸಭೆಗಳನ್ನು ನಡೆಸಲಾಗುವುದು ಎಂದರು.

ಇದಕ್ಕೂ ಮುನ್ನ ಸಭೆಯಲ್ಲಿ ಮಾತನಾಡಿದ ಬೆಂಗಳೂರು ವಿಶ್ವವಿದ್ಯಾಲಯದ ಡಾ.ಎಂ.ಕೆ.ಶ್ರೀಧರ್, ಜ್ಞಾನ ಆಯೋಗವನ್ನು ಹಾಗೂ ವಿಶ್ವವಿದ್ಯಾಲಯಗಳನ್ನು ಪರೀಕ್ಷಾ ಹೊರೆಯಿಂದ ಪಾರು ಮಾಡಲು ರಾಜ್ಯ ಮಟ್ಟದ ಪರೀಕ್ಷಾ ಪ್ರಾಧಿಕಾರವನ್ನು ರಚಿಸಬೇಕು. ವಿಶ್ವವಿದ್ಯಾಲಯ ಕಾಯ್ದೆಯ ಬದಲಾವಣೆ ಬಗ್ಗೆ ಚಿಂತನೆ ನಡೆಸಬೇಕು ಎಂದು ಸಲಹೆ ಮಾಡಿದರು.

ಸಭೆಯ ಅಧ್ಯಕ್ಷತೆ ವಹಿಸಿದ್ದ ಐಐಎಂಬಿಯ ನಿರ್ದೇಶಕ ಪಂಕಜ್‌ಚಂದ್ರ ಮಾತನಾಡಿ, ಸಂಶೋಧನೆಗೆ ಹೆಚ್ಚಿನ ಒತ್ತು ನೀಡಬೇಕು. ಶೈಕ್ಷಣಿಕ ಸ್ವಾಯತ್ತತೆ ಜೊತೆಗೆ ಆರ್ಥಿಕ ಸ್ವಾಯತ್ತತೆಯೂ ನೀಡಬೇಕು. ಕಾಲೇಜುಗಳೇ ಪಠ್ಯಕ್ರಮವನ್ನು ರೂಪಿಸಿಕೊಳ್ಳುವಂತಾಗಬೇಕು. ಸಿದ್ಧಪಡಿಸಿದ ಪಠ್ಯವನ್ನು ನೀಡಿ ಪಾಠ ಮಾಡಿ ಎಂದು ಹೇಳುವ ಬದಲು ಉಪನ್ಯಾಸಕರಿಗೆ ಪಠ್ಯಕ್ರಮವನ್ನು ಸಿದ್ಧಪಡಿಸಿಕೊಳ್ಳುವ ಜವಾಬ್ದಾರಿ ನೀಡಬೇಕು ಎಂದು ಸಲಹೆ ಮಾಡಿದರು.

ಅಧ್ಯಾಪಕ ವೃಂದ ಉತ್ತಮವಾಗಿಲ್ಲದಿದ್ದರೆ ಗುಣಮಟ್ಟದ ಶಿಕ್ಷಣ ನೀಡಲು ಸಾಧ್ಯವಿಲ್ಲ. ಅಧ್ಯಾಪಕರಿಗೆ ಕಾಲಕಾಲಕ್ಕೆ ತರಬೇತಿ ನೀಡಬೇಕು. ಶುಲ್ಕ ಸಂಗ್ರಹ ಸೇರಿದಂತೆ ಕಾಲೇಜುಗಳಿಗೆ ಹೆಚ್ಚಿನ ಸ್ವಾಯತ್ತತೆ ನೀಡಬೇಕು ಎಂದು ಅವರು ನುಡಿದರು.



ಉನ್ನತ ಶಿಕ್ಷಣ ಸಚಿವಾಲಯದ ಆಶ್ರಯದಲ್ಲಿ ಮಂಗಳವಾರ ಬೆಂಗಳೂರಿನಲ್ಲಿ ನಡೆದ ಶಿಕ್ಷಣ ಪ್ರತಿನಿಧಿಗಳ ಸಭೆಯಲ್ಲಿ ಉನ್ನತ ಶಿಕ್ಷಣ ಸಚಿವ ಅರವಿಂದ ಲಿಂಬಾವಳಿ, ಇಲಾಖೆಯ ಪ್ರಧಾನ ಕಾರ್ಯದರ್ಶಿ ಕೌಶಿಕ್ ಮುಖರ್ಜಿ, ಆಯುಕ್ತ ಮಹೇಂದ್ರ ಜೈನ್, ಶಿಕ್ಷಣ ತಜ್ಞ ಡಾ.ಗುರುರಾಜ ಕರ್ಜಗಿ ಸೇರಿದಂತೆ ಶಿಕ್ಷಣ ಕ್ಷೇತ್ರದ ಪ್ರತಿನಿಧಿಗಳು ಭಾಗವಹಿಸಿದ್ದರು. – ಪ್ರಜಾವಾಣಿ ಚಿತ್ರ



# ಬೆಂಗಳೂರು ಇತಿಹಾಸ ಮಾಲೆ

■ ಸುರೇಶ್ ಮೂನ sureshmoona@gmail.com

# ಶಿಕ್ಷಣ ಕ್ಷೇತ್ರಕ್ಕೆ ಮಾದರಿ

ನಂಜಪ್ಪನವರ ಸೇವೆ ಹಾಗೂ ಮಾರ್ಗದರ್ಶನದ ಸೌಲಭ್ಯವನ್ನು ಪಡೆದ ಬೆಂಗಳೂರಿನ ಮತ್ತೊಂದು ಪ್ರತಿಷ್ಠಿತ ಶಿಕ್ಷಣ ಸಂಸ್ಥೆಯೇ ಶೇಷಾದ್ರಿಪುರಂ ಶಿಕ್ಷಣ ದತ್ತಿ. ನಂಜಪ್ಪನವರಿಗೆ ಈ ಸಂಸ್ಥೆಯೊಂದಿಗೆ 1950ರ ದಶಕದಿಂದಲೇ ಸಂಪರ್ಕ ಬೆಳೆದಿತ್ತು. ಇದರ ಉಪಾಧ್ಯಕ್ಷರಾಗಿ ಸಂಸ್ಥೆಯ ಬೆಳವಣಿಗೆಗಾಗಿ ಶ್ರಮಿಸಿದ್ದರು. ಇವರ ನಿಷ್ಠೆ, ಪ್ರಾಮಾಣಿಕತೆ, ಸೇವಾ ಮನೋಭಾವನೆಯನ್ನು ಅರಿತಿದ್ದ ಆಗಿನ ಅಧ್ಯಕ್ಷ ಸಿ.ಡಿ.ಗೋಪಾಲ ಅಯ್ಯಂಗಾರ್ ತಮ್ಮನಂತರ 1966ರಲ್ಲಿ ಇವರನ್ನೇ ಅಧ್ಯಕ್ಷರನ್ನಾಗಿ ಮಾಡಿದರು. ಆಗಿನಿಂದ ಕೊನೆಯುಸಿರಿರುವವರೆಗೆ, ಅಂದರೆ ಸುಮಾರು 4 ದಶಕಗಳಿಗೂ ಹೆಚ್ಚು ಕಾಲ ಆ ಜವಾಬ್ದಾರಿ ನಿಭಾಯಿಸಿದರು.

ನಂಜಪ್ಪ ಅವರೊಂದಿಗೆ 1970ರ ದಶಕದಲ್ಲಿ ದತ್ತಿಯ ಕಾರ್ಯದರ್ಶಿಯಾಗಿ ದುಡಿದ ಕೆ.ಸಿ. ಪುಟ್ಟನರಸಯ್ಯ ನಂಜಪ್ಪ ಜೊತೆಗಿನ ತಮ್ಮ ಅನುಭವವನ್ನು ಹೀಗೆ ಹಂಚಿಕೊಳ್ಳುತ್ತಾರೆ. ಆಚಾರ್ಯ ಪಾಠಶಾಲಾ ವಿದ್ಯಾ ಸಂಸ್ಥೆಯ ಮ್ಯಾನೇಜಿಂಗ್ ಕಮಿಟಿಯಲ್ಲಿ ನಂಜಪ್ಪ ಅಧ್ಯಕ್ಷರಾಗಿದ್ದಾಗ ನಾನು ಸದಸ್ಯನಾಗಿದ್ದೆ. ಅಲ್ಲಿಂದ ನಮ್ಮಿಬ್ಬರ ಬಾಂಧವ್ಯ ಬೆಳೆಯಿತು. ಅವರು ನನ್ನಲ್ಲಿ ಏನನ್ನು ಗುರುತಿಸಿದರೋ ಏನೋ, 1974ರಲ್ಲಿ ನನ್ನನ್ನು ಚುನಾಯಿಸಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಆಡಳಿತ ಮಂಡಳಿಯ ಸದಸ್ಯನನ್ನಾಗಿಸಿದರು. ಆ ವೇಳೆಗಾಗಲೇ ಅಲ್ಲಿನ ಅಧ್ಯಕ್ಷರಾಗಿದ್ದ ಅವರೊಂದಿಗೆ ಕಾರ್ಯನಿರ್ವಹಿಸಲು ಅವಕಾಶವಾಗಿ ಸಂಸ್ಥೆಯ ನಿರ್ವಹಣೆಯ ಬಗ್ಗೆ ಅವರಿಂದ ನಾನು ಅನೇಕ ಸಂಗತಿಗಳನ್ನು ಕಲಿತೆ. ಮುಂದೆ 1976ರಲ್ಲಿ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆಯಾಗಿದ್ದೂ ನಂಜಪ್ಪನವರ ಬೆಂಬಲದಿಂದಲೇ. ಹಾಗೆ ಅವರೊಂದಿಗೆ ನಾನು ಸಹ ಸೇರುವಂತೆ ನಂಜಪ್ಪನವರೊಂದಿಗೆ ನನ್ನ ವ್ಯಕ್ತಿತ್ವವೂ ಸ್ಪಷ್ಟ ರೂಪ ಪಡೆದಿದೆ. ನಂಜಪ್ಪ ಮಾನವ ಸಂಪನ್ಮೂಲದ ನಿರ್ಮಾಪಕರು. ಸಮಾಜಕ್ಕೆ ಒಳಿತನ್ನು ಮಾಡುತ್ತಾ, ತಮ್ಮೊಂದಿಗೆ ಇತರರನ್ನೂ ಸೇರಿಸಿಕೊಂಡು ಅವರು ಹೋದವರು. ತಮಗಿಂತ ಹೆಚ್ಚಾಗಿ ಇತರರು ಬೆಳೆಯುವುದನ್ನು ಕಂಡು ಸಂತೋಷಪಡುತ್ತಿದ್ದರು. ದತ್ತಿಯ ಸಾಧನೆಯೇ ಈ ಮಾತಿಗೆ ಸಾಕ್ಷಿ. 1966ರಲ್ಲಿ ನಂಜಪ್ಪ ಅಧ್ಯಕ್ಷರಾದ ನಂತರ ಸಂಸ್ಥೆಯ ಬೆಳವಣಿಗೆ ಮತ್ತಷ್ಟು ತ್ವರಿತಗೊಂಡಿತು. 1971ರಲ್ಲಿ ಕಿರಿಯ ಕಾಲೇಜುಗಳು ಪ್ರಾರಂಭವಾದವು. ಎರಡೂ ಕಾಲೇಜುಗಳಿಗೆ ಸಾರ್ವಜನಿಕರಿಂದ ದೊರೆತ ಪ್ರೋತ್ಸಾಹದಿಂದಾಗಿ 1975ರಲ್ಲಿ ಕಲೆ ಮತ್ತು ವಾಣಿಜ್ಯ ವಿಭಾಗವುಳ್ಳ ಪದವಿ ಕಾಲೇಜು ಪ್ರಾರಂಭಿಸಲಾಯಿತು. 1978ರಲ್ಲಿ ವಿಜ್ಞಾನ ವಿಭಾಗವೂ ಸೇರಿತು. ಹಾಗೆಯೇ ಡಿಫಾರ್ಮಾ ವಿಭಾಗ ಮತ್ತು ಸಂಜೆ ಕಾಲೇಜುಗಳಿಗೂ ಚಾಲನೆ ದೊರಕಿತು. ಎಲ್ಲಾ ಬೆಳವಣಿಗೆಗೆ ನಂಜಪ್ಪನವರ ಮಾರ್ಗದರ್ಶನ, ಕರ್ತವ್ಯನಿಷ್ಠೆ, ಸಹಕಾರ, ಸಹಾಯಗಳೇ ಮುಖ್ಯ ಕಾರಣ. ನಮಗೆ ಅವರೆಂದೂ ಒಂದು ವ್ಯಕ್ತಿಯಾಗಿ ಕಂಡಿಲ್ಲ, ಬದಲಾಗಿ ಒಂದು ಶಕ್ತಿಯ ರೂಪದಲ್ಲಿ ಗೋಚರಿಸಿದ್ದಾರೆ.

1988ರಲ್ಲಿ ಈ ಸಂಸ್ಥೆ ಹಾಗೂ ಇದರ ಪ್ರಾಥಮಿಕ ಶಾಲೆಯ ಸುವರ್ಣ ಮಹೋತ್ಸವವು ನಂಜಪ್ಪ ಅಧ್ಯಕ್ಷತೆಯಲ್ಲಿ ನಡೆಯಿತು. ಸುವರ್ಣ ಮಹೋತ್ಸವ ಸ್ಮಾರಕ ಭವನ, ಗ್ರಂಥಾಲಯ, ತೆರೆದ ಸಭಾಂಗಣ, 28 ಕೊಠಡಿಯುಳ್ಳ ನಾಲ್ಕು ಮಹಡಿಯ ಶಾಲಾ ಕಟ್ಟಡ ಹೀಗೆ ಹಲವಾರು ರಚನಾತ್ಮಕ ಯೋಜನೆಗಳು ನಂಜಪ್ಪ ನೇತೃತ್ವದಲ್ಲಿ ಕೈಗೂಡಿದವು.

ಕೆ.ಎಂ. ನಂಜಪ್ಪ ಈ ಸಂಸ್ಥೆಗೆ ಸಲ್ಲಿಸಿದ ಸೇವೆಯ ಬಗ್ಗೆ ಪ್ರಸ್ತಾಪಿಸುತ್ತಾ ಈ ದತ್ತಿಯ ಪ್ರಸ್ತುತ ಕಾರ್ಯದರ್ಶಿಗಳಾಗಿರುವ ವೂಡೆ.ಪಿ. ಕೃಷ್ಣ ರವರು ಹೀಗೆ ಸ್ಮರಿಸುತ್ತಾರೆ. ನನಗೂ ನಂಜಪ್ಪನವರಿಗೂ 1984ರಿಂದ ರೆಡ್‌ಕ್ರಾಸ್ ಸಂಸ್ಥೆಯ ಕಾರ್ಯಕ್ರಮದೊಂದಿಗೆ ಸಂಬಂಧ ಬೆಳೆಯಿತು. ಆಗಿನಿಂದಲೇ ನನ್ನಲ್ಲಿನ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸಿದ ಪರಿಣಾಮವಾಗಿ 1992ರಲ್ಲಿ ನಾನು ಈ ದತ್ತಿಗೆ ಟ್ರಸ್ಟಿಯಾಗಿ ಸೇರಿದೆ. ಆಗ ಅವರು ಅಧ್ಯಕ್ಷರಾಗಿದ್ದರು. ನಂತರ 1995ರಿಂದ 2001ರವರೆಗೆ ಸಹಕಾರ್ಯದರ್ಶಿಯಾಗಿ, ಅಲ್ಲಿಂದ ಕಾರ್ಯದರ್ಶಿಯಾಗಿ ಜವಾಬ್ದಾರಿ ನಿರ್ವಹಿಸುತ್ತಾ ಬರುತ್ತಿದ್ದೇನೆ. ಈ ಸುಮಾರು ಎರಡೂವರೆ ದಶಕಗಳ ಕಾಲ ನಂಜಪ್ಪ ಜೊತೆಗಿನ ಒಡನಾಟ ಸಿಕ್ಕಿರುವುದು ನನ್ನ ಭಾಗ್ಯ. ನನಗೂ ಅವರಿಗೂ ವಯಸ್ಸಿನಲ್ಲಿ 5 ದಶಕಗಳ ವ್ಯತ್ಯಾಸ. ಆದರೆ ಅವರೆಂದೂ ನನ್ನನ್ನು ಚಿಕ್ಕವನೆಂದು ಪರಿಗಣಿಸಿಲ್ಲ. ಸಮಕಾಲೀನರಿಗೆ ಕೊಡುವ ಗೌರವವನ್ನೇ ಕೊಟ್ಟಿದ್ದಾರೆ. ಸಂಸ್ಥೆಗೆ ಅವರು ಸಲ್ಲಿಸಿರುವ ಸೇವೆ ಅತ್ಯಮೂಲ್ಯ. ಪ್ರಾರಂಭದ ದಶಕಗಳಲ್ಲಿ ಇದು ಸಂಕಷ್ಟಗಳಲ್ಲಿ ಸಿಲುಕಿದಾಗ ಹಣ ಕೊಟ್ಟಿದ್ದಾರೆ. ಮುಂದೆ ಅದನ್ನು ಹಿಂದಿರುಗಿಸಲು ಕಷ್ಟವಾದಾಗ ಅದನ್ನೇ ದಾನವನ್ನಾಗಿಯೂ ಪರಿವರ್ತಿಸಿದ್ದಾರೆ. ಇಲ್ಲಿಗೆ ಅನೇಕ ವಿದ್ವಾಂಸರನ್ನು, ಗಣ್ಯರನ್ನು ಆಹ್ವಾನಿಸಿ ಸಂಸ್ಥೆಯ ಘನತೆ ಹೆಚ್ಚಿಸಿದ್ದಾರೆ. ಈ ಸಂಸ್ಥೆಯ ಬೆಳವಣಿಗೆಗೆ ಸಂಬಂಧಿಸಿದಂತೆ ನಂಜಪ್ಪನವರ ಹೆಸರನ್ನು ಬಿಟ್ಟು ನಾವು ಯೋಚಿಸಲೂ ಸಾಧ್ಯವಿಲ್ಲ. ನಮ್ಮ ಸಂಸ್ಥೆಗೆ ಅವರು ಪಿತೃಸಮಾನರಾಗಿದ್ದಾರೆ. ಅವರಿಗೆ ಸರ್ ಎಂ. ವಿಶ್ವೇಶ್ವರಯ್ಯ, ಸರ್ ಕೆ.ಪಿ. ಪುಟ್ಟಣ್ಣಚೆಟ್ಟಿ ಅವರಂತಹ ಹಿರಿಯರು ಆದರ್ಶವಾಗಿದ್ದರು. ಅವರಂತೆ ನಡೆನುಡಿಗಳನ್ನು ರೂಪಿಸಿಕೊಂಡಿದ್ದ ಇವರು ಉಡುಪು ಧರಿಸುವುದರಲ್ಲಿ ಶಿಸ್ತುಬದ್ಧರಾಗಿದ್ದರು. ಯಾವುದೇ ಕಾರ್ಯಕ್ರಮಕ್ಕಾದರೂ ಅವರು ಅಚ್ಚುಕಟ್ಟಾದ ಸೂಟ್ ಧರಿಸಿ ಬರುತ್ತಿದ್ದರು. ಅವರು ನಿಧನರಾಗುವ ಕೊನೆಯ ದಿನಗಳಲ್ಲಿ ನರ್ಸಿಂಗ್ ಹೋಮ್‌ನಲ್ಲಿದ್ದಾಗ ಅಲ್ಲಿನ ನರ್ಸ್ ಇಲ್ಲಿಗೆ ಅಚ್ಚುಕಟ್ಟಾದ ಸೂಟ್ ಧರಿಸಿ ನರ್ಸಿಂಗ್ ಹೋಮ್‌ಗೆ ಸೇರಿದ ಮೊದಲ ಪೇಶೆಂಟ್ ಇವರು ಎಂದಿದ್ದರು. ಒಟ್ಟಿನಲ್ಲಿ ಹೇಳುವುದಾದರೆ ನಂಜಪ್ಪನವರದ್ದು ಆದರ್ಶ ವ್ಯಕ್ತಿತ್ವ. ನಮ್ಮ ದತ್ತಿಯ ಸ್ನೇಹ-ಸಮ್ಮಿಲನದಂತಹ ಕಾರ್ಯಕ್ರಮದಲ್ಲಿ ಎಲ್ಲರೂ ಭೇದಭಾವವಿಲ್ಲದೆ ಇವರಿಗೆ ಗೌರವ ಸಮರ್ಪಿಸುತ್ತಿದ್ದರು.




ದತ್ತಿಯ ಕಾರ್ಯಕ್ರಮವೊಂದರಲ್ಲಿ ಕೆ.ಎಂ. ನಂಜಪ್ಪ

■ ಮುಂದುವರಿಯುವುದು

Monday, June 30, 2008

**DECCAN HERALD**

**Seshadripuram Pre-university College:** Orientation Programme and inauguration of cultural and academic programme, NR Pandith Aradhya, President, Sheshadripuram Educational Trust; Dr Sameera Simha, Retired professor in Education, Vijaya Teachers College, to preside; College Prayer Hall, 18, 3rd Main Road, Kengeri Satellite Town, 9am

ಸೋಮವಾರ

30ನೇ ಜೂನ್ 2008

**ಪ್ರಜಾವಾಣಿ**

**ಶೇಷಾದ್ರಿಪುರ ಪದವಿಪೂರ್ವ ಕಾಲೇಜು:** ಕಾಲೇಜಿನ ಆವರಣ, 3ನೇ ಮುಖ್ಯರಸ್ತೆ, ಕೆಂಗೇರಿ ಉಪನಗರ. 'ಸಂಸ್ಕೃತಿ ಮತ್ತು ಶೈಕ್ಷಣಿಕ ಕಾರ್ಯಕ್ರಮ ಉದ್ಘಾಟನೆ' ಅತಿಥಿಗಳು– ನಿವೃತ್ತ ಪ್ರಾಧ್ಯಾಪಕ ಡಾ. ಸಮೀರ್ ಸಿಂಹ, ಶೇಷಾದ್ರಿಪುರ ಶಿಕ್ಷಣ ಟ್ರಸ್ಟ್ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ. ಅಧ್ಯಕ್ಷತೆ– ಟ್ರಸ್ಟ್‌ನ ಅಧ್ಯಕ್ಷ ಎನ್.ಆರ್.ಪಂಡಿತ್ ಆರಾಧ್ಯ. ಬೆಳಿಗ್ಗೆ 9.

**UDAYAVANI**

ಸೋಮವಾರ 30 ಜೂನ್ 2008

**ಶೇಷಾದ್ರಿಪುರ ಪದವಿ ಪೂರ್ವ ಕಾಲೇಜು:** 3ನೇ ಮುಖ್ಯ ರಸ್ತೆ, ಕೆಂಗೇರಿ ಉಪನಗರ. ನೂತನ ವಿದ್ಯಾರ್ಥಿಗಳಿಗೆ ಓರಿಯೆಂಟೇಷನ್ ಕಾರ್ಯಕ್ರಮ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮ ಉದ್ಘಾಟನೆ. ಅಧ್ಯಕ್ಷತೆ: ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತ್ ಆರಾಧ್ಯ. ಅತಿಥಿ: ವಿಜಯ ಶಿಕ್ಷಕರ ಕಾಲೇಜಿನ ಡಾ। ಸಮೀರ ಸಿಂಹಾ, ಸಂಸ್ಥೆ ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ.ಪಿ. ಕೃಷ್ಣ. ಬೆಳಿಗ್ಗೆ 9.



# ಬೆಂಗಳೂರು ಇತಿಹಾಸ ಮಾಲೆ

■ ಸುರೇಶ್ ಮೂನ *sureshmoona@gmail.com*

# ಶಿಕ್ಷಣ ಕ್ಷೇತ್ರಕ್ಕೆ ಅನುಪಮ ಸೇವೆ



**ಬೆಂ**ಗಳೂರು ನಗರದ ಪ್ರಸಿದ್ಧ ಹಾಗೂ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳ ಪೈಕಿ ಒಂದಾದ ರಾಷ್ಟ್ರೀಯ ವಿದ್ಯಾಲಯ (ಆರ್.ವಿ. ಶಿಕ್ಷಣ ಸಂಸ್ಥೆ) ಮೂರು ದಶಕಗಳಿಗೂ ಹೆಚ್ಚು ಕಾಲ ಕೆ.ಎಂ. ನಂಜಪ್ಪನವರ ನೆರವು ಹಾಗೂ ಮಾರ್ಗದರ್ಶನವನ್ನು ಪಡೆದಿದೆ. ಇಲ್ಲಿ ಪ್ರಾರಂಭಗೊಂಡ ದಿನದಿಂದಲೇ 200-300 ವಿದ್ಯಾರ್ಥಿಗಳಿದ್ದರು. ಕೆ.ಎಂ. ನಂಜಪ್ಪನವರು ಇದರ ಬಗ್ಗೆ ಅಭಿಮಾನದಿಂದ ತಮ್ಮ ಹಿರಿಯ ಮಗಳಿಗೆ ಇಲ್ಲಿಯೇ ಶಿಕ್ಷಣವನ್ನು ಕೊಡಿಸಿದರು. ಕ್ರಮೇಣ ಇದು ಕೆ.ಎಂ. ನಂಜಪ್ಪನವರಂತಹ ಹಿರಿಯರ ಮಾರ್ಗದರ್ಶನ ಹಾಗೂ ಇತರ ಪದಾಧಿಕಾರಿಗಳ ನಿಷ್ಠೆ ಮತ್ತು ಸಮರ್ಪಕ ನಿರ್ವಹಣೆಯಿಂದಾಗಿ ಪ್ರಾಥಮಿಕ, ಪ್ರೌಢಶಾಲೆ, ಶಿಕ್ಷಕರ ತರಬೇತಿ, ಮಹಿಳೆಯರಿಗೆ ಪ್ರತ್ಯೇಕ ಶಾಲಾ ಕಾಲೇಜುಗಳು, ಇಂಜಿನಿಯರಿಂಗ್ ಕಾಲೇಜ್ ಹೀಗೆ ಹಲವಾರು ವಿಭಾಗಗಳನ್ನು ಹೊಂದಿದ್ದು, ಬೆಂಗಳೂರಿನ ಮತ್ತು ನಮ್ಮ ನಾಡಿನ ಶಿಕ್ಷಣ ಕ್ಷೇತ್ರಕ್ಕೆ ಮಹತ್ತರ ಸೇವೆಯನ್ನು ಸಲ್ಲಿಸುತ್ತಿವೆ. ಕೆ.ಎಂ. ನಂಜಪ್ಪನವರು ತಮ್ಮ ಈ ಸಂಸ್ಥೆಯೊಂದಿಗಿನ ಸಂಬಂಧವನ್ನು ಹೆಮ್ಮೆಯಿಂದ ಹೇಳುತ್ತಿದ್ದರು.

ಈ ಸಂಸ್ಥೆಯ ಶಿವಾನಂದ ಶರ್ಮರವರು ಕಾರ್ಯದರ್ಶಿಗಳಾಗಿದ್ದಾಗ ಕೆ.ಸಿ. ರಾಮಯ್ಯನವರು ಅಧ್ಯಕ್ಷರಾಗಿಯೂ ಕೆ.ಎಂ. ನಂಜಪ್ಪನವರು ಉಪಾಧ್ಯಕ್ಷರಾಗಿಯೂ ಇದ್ದರು. ರಾಮಯ್ಯನವರ ನಂತರ ಶರ್ಮರವರು ಕೆ.ಎಂ. ನಂಜಪ್ಪನವರನ್ನೇ ಅಧ್ಯಕ್ಷರಾಗುವಂತೆ ಕೋರಿದ್ದರು. ಆದರೆ ಇವರು ಉಪಾಧ್ಯಕ್ಷರಾಗಿಯೇ ಮುಂದುವರಿಯುವುದಾಗಿ ಹೇಳಿ, ಕೊನೆಯವರೆಗೂ ಅದೇ ಸ್ಥಾನದಲ್ಲೇ ಮುಂದುವರೆದರು. ನಮ್ಮ ಸಂಸ್ಥೆ ಒಂದು ಟೀಮ್ ಸ್ಪಿರಿಟ್‌ನಿಂದ ಕೆಲಸ ಮಾಡುತ್ತದೆ. ಆದ್ದರಿಂದಲೇ ಉತ್ತಮ ಗುಣಮಟ್ಟದ ಶಿಕ್ಷಣವನ್ನು ಕೊಡಲು ಸಾಧ್ಯವಾಗಿದೆ ಎಂದು ಅವರು ಆಗಾಗ್ಗೆ ಹೇಳುತ್ತಿದ್ದರು.

ಮೈಸೂರು ರಸ್ತೆಯಲ್ಲಿರುವ ಆರ್.ವಿ. ಇಂಜಿನಿಯರಿಂಗ್



ಕಾಲೇಜಿಗೂ ಕೆ.ಎಂ. ನಂಜಪ್ಪನವರಿಗೂ ಪ್ರಾರಂಭದಿಂದಲೂ ನಿಕಟ ಸಂಪರ್ಕವಿದೆ. ಅದರ ಪ್ರಾರಂಭದ ಸಮಸ್ಯೆಗಳು ನಿವಾರಣೆಗೊಂಡು ಒಂದು ನೆಲೆಯನ್ನು ಕಂಡುಕೊಳ್ಳಲು ಇವರು ವಹಿಸಿರುವ ಪಾತ್ರ ಪ್ರಮುಖ ಹಾಗೂ ಅಮೂಲ್ಯವಾದದ್ದು. ಈ ಬಗ್ಗೆ ನಂಜಪ್ಪನವರೇ ಹೀಗೆ ಹೇಳಿದ್ದರು.

ಆಗ ಮೈಸೂರು ವಿಶ್ವವಿದ್ಯಾನಿಲಯದೊಂದಿಗೆ ವ್ಯವಹರಿಸಬೇಕಿತ್ತು. 1963ರಲ್ಲಿ ಇಂಜಿನಿಯರಿಂಗ್ ಕಾಲೇಜು ಸ್ಥಾಪನೆಗೆ ಇಡಬೇಕಾಗಿದ್ದ 5000 ರೂ.ಗಳ ಠೇವಣಿ ಹಣವೂ ನಮ್ಮಲ್ಲಿರಲಿಲ್ಲ, ಆಗ ನಮಗೆ ನೆರವಾದವರು ಕಂಟ್ರಾಕ್ಟರ್ ಎ. ಚಾಮರಾಜು ಮತ್ತು ಮಂಡಿ ವ್ಯಾಪಾರಿಗಳಾಗಿದ್ದ ನರಸಿಂಹಯ್ಯನವರು. ಕಾಂತರಾಜಪುರದ ಎನ್. ಶಿವಪ್ಪನವರು ಆಗ ಸೆನೆಟ್ ಸದಸ್ಯರಾಗಿದ್ದು ನಮಗೆ ವಿಶ್ವವಿದ್ಯಾನಿಲಯದ ನೆರವನ್ನು ಪಡೆಯಲು ನೆರವಾದರು. ಇಂಜಿನೀರಿಂಗ್ ಕಾಲೇಜು ಸ್ಥಾಪನೆಗೆ ವಿಶಾಲವಾದ ಸ್ಥಳ ಬೇಕಿತ್ತು. ಆಗ ಬೆಂಗಳೂರು-ಮೈಸೂರು ರಸ್ತೆಯಲ್ಲಿ ಕೆಂಗೇರಿ ಬಳಿ ನೇಪಾಳದ ರಾಜವಂಶದ ರಾಣಾ ಸಾಬ್ ಅವರಿಗೆ ಸೇರಿದ್ದ ಎಂಬತ್ತು ಎಕರೆ ಜಮೀನು ಇತ್ತು. ಅದನ್ನು ಕಾಲೇಜಿಗಾಗಿ ಖರೀದಿಸಲು ಕೇಳಿದಾಗ 3 ಲಕ್ಷ ರೂ. ಹೇಳಿದ್ದರು. ಆದರೆ ಮಾತುಕತೆಗಳು ಮುಗಿಯುವುದರೊಳಗೆ ಮೂರು ವರ್ಷಗಳು ಮುಗಿದುಹೋಗಿ, ಅದೇ ಹಣಕ್ಕೆ ಐವತ್ತೆರಡು ಎಕರೆಗಳನ್ನು ಕೊಂಡು ಕೊಳ್ಳುವಂತಾಯಿತು. ಆದರೂ ಕಾಲೇಜಿನ ನಿರ್ಮಾಣಕ್ಕೆ ಸೂಕ್ತ ಸ್ಥಳ ದೊರೆತ ಸಮಾಧಾನ ನಮಗಾಯಿತು. ಕೂಡಲೆ ಕಟ್ಟಡದ ಕಾಮಗಾರಿ ಪ್ರಾರಂಭವಾಯಿತು. ನಾನು ಸಿವಿಲ್ ಬ್ಲಾಕ್ ನಿರ್ಮಾಣಕ್ಕೆ ಒಂದು ಲಕ್ಷ ರೂ. ನೀಡಿದೆ. ಆಗ ಅಧ್ಯಕ್ಷರಾಗಿದ್ದ ಕಸ್ತೂರಿ ರಂಗಶೆಟ್ಟರು ಆಡಳಿತ ವಿಭಾಗದ ನಿರ್ಮಾಣಕ್ಕೆ ನೆರವಾದರು.

ಇಂದಿಗೂ ಕಾಲೇಜಿನ ಮಹಾದ್ವಾರವನ್ನು ಪ್ರವೇಶಿಸುತ್ತಿದ್ದಂತೆ ಮೊದಲು ಕಣ್ಣಿಗೆ ಬೀಳುವುದು ಇವರ ಆರ್ಥಿಕ ನೆರವಿನಿಂದ ರೂಪುಗೊಂಡ ನಂಜಪ್ಪ ಬ್ಲಾಕ್. ಇದಲ್ಲದೆ ಈ ಕಾಲೇಜಿನ ಗವರ್ನಿಂಗ್ ಕೌನ್ಸಿಲ್‌ನ ಛೇರ್‌ಮನ್‌ರಾಗಿಯೂ ಪ್ರಾರಂಭದಿಂದಲೂ ಇದ್ದು, ಇದರ ಸರ್ವತೋಮುಖ ಅಭಿವೃದ್ಧಿಗೆ ಕೆ.ಎಂ. ನಂಜಪ್ಪನವರು ಕಾರಣರಾಗಿದ್ದರು.

ಅವರಿಗೆ ಆ ಸಂಸ್ಥೆಯ ಬಗ್ಗೆ ಅಪಾರವಾದ ಅಭಿಮಾನವಿತ್ತು. ಇದೊಂದು ವಿಶ್ವವಿದ್ಯಾನಿಲಯವೇ ಆಗುತ್ತದೆ. ರಾಷ್ಟ್ರ ಹಾಗೂ ಅಂತಾರಾಷ್ಟ್ರೀಯ ಖ್ಯಾತಿ ಪಡೆಯುತ್ತದೆ ಎನ್ನುತ್ತಿದ್ದರು ಎಂದು ತಿಳಿಸುತ್ತಾರೆ ಇವರ ನಿಕಟವರ್ತಿಗಳಾಗಿದ್ದ ವೂಡೆ ಪಿ. ಕೃಷ್ಣರವರು. ಈ ಕಾಲೇಜಿನ ಪ್ರಾಂಶುಪಾಲರಿಂದ ಹಿಡಿದು ಅಟೆಂಡರ್‌ವರೆಗೆ ಎಲ್ಲರಿಗೂ ಪಿತೃಸಮಾನರಾಗಿದ್ದ ಇವರನ್ನು ಕಂಡರೆ ಅಪಾರ ಗೌರವ, ಅಭಿಮಾನ. ಅದನ್ನು ವ್ಯಕ್ತಪಡಿಸಲು ಇವರನ್ನು ಈ ಕಾಲೇಜು 2008ರ ಮಾರ್ಚ್ 11ರಂದು ಅತ್ಯಂತ ಆತ್ಮೀಯತೆಯಿಂದ ಸನ್ಮಾನಿಸಿ, ಗೌರವಿಸಿತು. ಇವರೊಂದಿಗೆ ಗೌರವವನ್ನು ಸ್ವೀಕರಿಸಿದ ಪತ್ನಿ ಸರೋಜಾ ನಂಜಪ್ಪ ಹೀಗೆ ಹೇಳುತ್ತಾರೆ ಅಂದು ಪ್ರಾಂಶುಪಾಲರಿಂದ ಹಿಡಿದು ಅಟೆಂಡರ್‌ವರೆಗೆ ಒಬ್ಬರೂ ತಪ್ಪಿಸದಂತೆ ಕಾರ್ಯಕ್ರಮಕ್ಕೆ ಹಾಜರಿದ್ದರು.

ಒಂದೊಂದು ವಿಭಾಗದ ಮುಖ್ಯಸ್ಥರೂ ಬಂದು ಇವರಿಗೆ ಫಲಪುಷ್ಪ ಹಾಗೂ ಗೌರವಕಾಣಿಕೆಗಳನ್ನು ಅರ್ಪಿಸುವಲ್ಲಿ ಇದ್ದ ಪ್ರೀತಿ, ಅಭಿಮಾನವನ್ನು ಕಂಡು ನನಗೆ ಆಶ್ಚರ್ಯವಾಯಿತು, ಹೆಮ್ಮೆಯೆನಿಸಿತು. ಮೈಸೂರುಪೇಟವನ್ನು ತೊಡಿಸಿದ್ದರು. ರೇಷ್ಮೆ ಶಾಲು ಹಾಗೂ ಹೂವಿನಹಾರಗಳಿಂದಾಗಿ ಅವರು ಬಹಳ ಲಕ್ಷಣವಾಗಿ ಕಾಣುತ್ತಿದ್ದರು. ಅವರಿಗೆ ಮಾತನಾಡಲಾಗುತ್ತಿರಲಿಲ್ಲವಾಗಿ ನಾನೆ ಅವರ ಪರವಾಗಿ ಕೆ.ಎಂ. ನಂಜಪ್ಪನವರ ಬಗ್ಗೆ ಅವರೆಲ್ಲರೂ ಹೊಂದಿದ್ದ ಆತ್ಮೀಯ ಭಾವನೆಗಾಗಿ ಕೃತಜ್ಞತೆ ಸಲ್ಲಿಸಿದೆ.

# ನಿಜವಾದ ಅರ್ಥದಲ್ಲಿ ಪೂರ್ಣಾವಧಿ ಸಮಾಜ ಸೇವಕರಾಗಿದ್ದವರು ಕೆ. ಎಂ. ನಂಜಪ್ಪ

**- ಡಾ॥ ಸಿ. ಸೋಮಶೇಖರ**



ಕೆ. ಎಂ. ನಂಜಪ್ಪನವರ ಭಾವಚಿತ್ರಕ್ಕೆ ಪುಷ್ಪನಮನ : ಸಿ. ಬಸವರಾಜು, ಎನ್.ಪುಟ್ಟರುದ್ರ, ಡಾ.ಸಿ.ಸೋಮಶೇಖರ, ನಾ.ಮಲ್ಲಿಕಾರ್ಜುನ ಮತ್ತು ಕೆ.ರುದ್ರಪ್ಪ ಇದ್ದಾರೆ.



ಆರ್.ನೀಲಾಂಬಿಕೆ ಅವರಿಂದ ವಚನ ಗಾಯನ.

"ಅವರ ವಿನಯ ಸಂಪನ್ನತೆ ಅತ್ಯಂತ ಶ್ಲಾಘನೀಯ. ಬಾಳಿನುದ್ದಕ್ಕೂ ಎನಗಿಂತ ಕಿರಿಯರಿಲ್ಲ ಎನ್ನುವಂತೆ ನಡೆದರು. ನಿಜವಾದ ಅರ್ಥದಲ್ಲಿ ಪೂರ್ಣಾವಧಿ ಸಮಾಜ ಸೇವಕರಾಗಿದ್ದುದರಿಂದಲೇ ೯೭ ವರ್ಷಗಳ ಕಾಲ ಆರೋಗ್ಯವಂತ ಜೀವನ ನಡೆಸಿದರು. ಅತ್ಯಂತ ಶಿಸ್ತು ಬದ್ಧ ಜೀವನ ನಡೆಸಿದ ಕೆ.ಎಂ.ನಂಜಪ್ಪನವರು ತಮ್ಮ ಮಹಾನ್ ವ್ಯಕ್ತಿತ್ವದ ಮೂಲಕ ಜನರ ಮನಸ್ಸಿನಲ್ಲಿ ಚಿರಸ್ಥಾಯಿಯಾಗುಳಿದಿರುವ ಮಹಾನ್ ಸಾಧಕ. ಸಾರ್ವಜನಿಕ ರಂಗದಲ್ಲಿರುವವರು ಹೇಗೆ ತಮ್ಮ ಕೈ, ಬಾಯಿಗಳನ್ನು ಶುದ್ಧವಾಗಿಟ್ಟು ಕೊಳ್ಳಬೇಕೆಂಬುದನ್ನು ತೋರಿಸಿ ಕೊಟ್ಟಿದ್ದಾರೆ. ಅವರ ಮಾರ್ಗದರ್ಶನದಲ್ಲಿ ವೂಡೆ ಪಿ.ಕೃಷ್ಣ ಅವರು ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳನ್ನು ಬೃಹತ್ ಪ್ರಮಾಣದಲ್ಲಿ ಕಟ್ಟಿ ಒಂದು ಮಹಾ ಕ್ರಾಂತಿಯನ್ನೇ ಮಾಡಿದ್ದಾರೆ. ಇಂತಹ ಮಹಾನುಭಾವರ ಹೆಸರಿನಲ್ಲಿ ಒಂದು ಸೂಕ್ತ ಸ್ಮಾರಕ ನಿರ್ಮಾಣ ಮಾಡೋಣ" ಎಂದು ಕರ್ನಾಟಕ ಪ್ರವಾಸೋದ್ಯಮ ಇಲಾಖೆ ನಿರ್ದೇಶಕ ಡಾ.ಸಿ.ಸೋಮಶೇಖರ ಅವರು ಕರೆ ನೀಡಿದರು.

ಅವರು ಇತ್ತೀಚೆಗೆ ಚಾಮರಾಜಪೇಟೆಯ ಬಿ.ಕೆ.ಮರಿಯಪ್ಪ ವಿದ್ಯಾರ್ಥಿ ನಿಲಯದ ಸಭಾಂಗಣದಲ್ಲಿ "ರಾಜ್ಯ ಪ್ರಗತಿ ಬಳಗ"ದ ಆಶ್ರಯದಲ್ಲಿ [illegible] ಕಾರ್ಯಕ್ರಮದಲ್ಲಿ ಇತ್ತೀಚೆಗೆ ನಿಧನರಾದ "ನುಡಿದಂತೆ ನಡೆದ, ನಡೆದಂತೆ ನುಡಿದ ಹಿರಿಯ ಚೇತನ ಕೆ.ಎಂ.ನಂಜಪ್ಪ "ಅವರಿಗೆ ಶ್ರದ್ಧಾಂಜಲಿ ಸಲ್ಲಿಸಿ ಮಾತನಾಡಿದರು.

ಕೆ. ಎಂ. ನಂಜಪ್ಪನವರ ಭಾವಚಿತ್ರಕ್ಕೆ ಪುಷ್ಪ ನಮನ ಮಾಡಿ ಕಾರ್ಯಕ್ರಮ ಉದ್ಘಾಟಿಸಿದ ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌ.ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಅವರು "ಕೆ.ಎಂ.ನಂಜಪ್ಪ ಒಬ್ಬ ಅಜಾತ ಶತ್ರು. ಅನೇಕ ಸಂಸ್ಥೆಗಳನ್ನು ಕಟ್ಟಿದರು. ಅವರು ಸ್ಥಾಪಿಸಿದ ವಿದ್ಯಾಸಂಸ್ಥೆಗಳಲ್ಲಿ ಇಂದು ಲಕ್ಷಾಂತರ ಮಂದಿ ವಿದ್ಯಾಭ್ಯಾಸ ಮಾಡುತ್ತಿದ್ದು ಸಾವಿರಾರು ಮಂದಿ ಉದ್ಯೋಗಿಗಳಾಗಿದ್ದಾರೆ. ಇತರರಿಗಾಗಿ ಬದುಕುವವರು ಮಾತ್ರ ನಿಜವಾಗಿಯೂ ಜೀವಂತರಾಗಿರುತ್ತಾರೆ ಎಂದು ಸ್ವಾಮಿ ವಿವೇಕಾನಂದರು ಹೇಳಿದ ಮಾತುಗಳು ಇವರಿಗೆ ಅನ್ವಯಿಸುತ್ತವೆ. ಬಸವಣ್ಣನವರ ಕಾಯಕ, ದಾಸೋಹ ತತ್ತ್ವಗಳನ್ನು ಕಾಯಾ, ವಾಙ್ಮನಸಾ ಪಾಲಿಸಿದ ಕೆ.ಎಂ.ನಂಜಪ್ಪ ನಮಗೆ ಸದಾ ಆದರ್ಶರಾಗಿರುತ್ತಾರೆ" ಎಂದು ಹೇಳಿದರು.

ಅಧ್ಯಕ್ಷತೆ ವಹಿಸಿದ್ದ ಬಿ.ಕೆ. ಮರಿಯಪ್ಪ ಧರ್ಮ ಸಂಸ್ಥೆಯ ವ್ಯ.ಧರ್ಮದರ್ಶಿ ಎನ್.ಪುಟ್ಟರುದ್ರ ಅವರು ರೆಡ್‌ಕ್ರಾಸ್ ಸಂಸ್ಥೆಯಲ್ಲಿ ಅಪ[illegible] ಸೇವೆ ಸಲ್ಲಿಸಿ, ರಕ್ತದಾನದ ಮಹತ್ವವನ್ನು ಜನರಿಗೆ ತಿಳಿಸಿಕೊಟ್ಟ ಕೆ.ಎಂ.ನಂಜಪ್ಪನವರನ್ನು ಶ್ಲಾಘಿಸಿ, ಬೆಂಗಳೂರಿನ ಮಹಾ ಪೌರರಾಗಿದ್ದಾಗ ಹಾಗೂ ಚೇಂಬರ್ ಆಫ್ ಕಾಮರ್ಸ್ ಅಧ್ಯಕ್ಷರಾಗಿದ್ದಾಗಲಾಗಲಿ ಎಂದೂ ಹೆಸರು ಕೆಡಿಸಿಕೊಳ್ಳಲಿಲ್ಲ ಎಂದು ಹೇಳಿದರು.

ಪತ್ರಕರ್ತ ಟಿ.ಪಿ.ಪ್ರಸನ್ನಕುಮಾರ್, ಬಿ.ಎ.ಎಸ್.ವಿ (ನ) ಸಮಿತಿ ಅಧ್ಯಕ್ಷ ಕೆ.ರುದ್ರಪ್ಪ, ಎ.ಎಸ್.ವಿ.ಎನ್.ವಿ. ಸಂಘದ ಅಧ್ಯಕ್ಷ ಎ.ನಂಜುಂಡಪ್ಪ, ಕವಿ ಜರಗನಹಳ್ಳಿ ಶಿವಶಂಕರ್ ಹಾಗೂ ಕನ್ನಡ ಚಳವಳಿ ಮುಖಂಡ ಸಿ. ಬಸವರಾಜು ಮೊದಲಾದವರೂ ನುಡಿಕಾಣಿಕೆ ಸಲ್ಲಿಸಿದರು.

ರು.ಬಸಪ್ಪ ಅವರು ನಿರೂಪಿಸಿದರು. ಆರ್.ನೀಲಾಂಬಿಕೆ ವಚನ ಗಾಯನ ಮಾಡಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ನಾ.ಮಲ್ಲಿಕಾರ್ಜುನ ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಬೆಂಗಳೂರಿನ ಹೆಮ್ಮೆಯ ಸಂಸ್ಥೆಗಳು: ಕರ್ನಾಟಕ ಗಾಂಧಿ ಸ್ಮಾರಕ ನಿಧಿ



## ಬೆಂಗಳೂರು ಇತಿಹಾಸ ಮಾಲೆ

ಸುರೇಶ್ ಮೂನ *sureshmoona@gmail.com*

# ಗಾಂಧಿ ಶಾಂತಿ ಪ್ರತಿಷ್ಠಾನ

**ಕು**ಮಾರ ಪಾರ್ಕ್ ಪೂರ್ವದಲ್ಲಿರುವ ಗಾಂಧಿ ಭವನದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯೊಂದಿಗೆ ಅದರ ಸೋದರ ಸಂಸ್ಥೆಯಾದ 'ಗಾಂಧಿ ಶಾಂತಿ ಪ್ರತಿಷ್ಠಾನ'ವೂ ಇದೆ. ಇದರ ಪ್ರಾರಂಭಕ್ಕೆ ಅದರದ್ದೇ ಆದರ ಹಿನ್ನೆಲೆ ಇದೆ. 1950ರ ದಶಕದ ಉತ್ತರಾರ್ಧದ ವೇಳೆಗೆ ಕೆಲವು ರಾಷ್ಟ್ರಗಳ ನಡುವೆ ಹೆಚ್ಚುತ್ತಿದ್ದ ಅಣ್ವಸ್ತ್ರ ಪೈಪೋಟಿ ಮಾನವ ಜನಾಂಗ ಮತ್ತು ನಾಗರಿಕತೆಯ ಅಸ್ತಿತ್ವಕ್ಕೆ ಮಾರಕವಾಗುವಂತಿತ್ತು. ಆಗ ಎಲ್ಲೆಡೆ ಶಾಂತಿಯ ಬಗ್ಗೆ ಅರಿವು ಮೂಡಿಸುವ ಅವಶ್ಯಕತೆ ಹೆಚ್ಚಾಗಿತ್ತು. ಆ ವೇಳೆಗೆ ಮಹಾತ್ಮಾ ಗಾಂಧಿ ನೇತೃತ್ವದಲ್ಲಿ ಮುಖ್ಯವಾಗಿ ಅಹಿಂಸಾ ಮಾರ್ಗದ ಮೂಲಕ ಭಾರತ ಸ್ವಾತಂತ್ರ್ಯವನ್ನು ಪಡೆದುಕೊಂಡ ಸಂಗತಿ ವಿಶ್ವಜನಿತವಾಗಿತ್ತು. ಗಾಂಧಿ ಅವರ ಸತ್ಯ ಮತ್ತು ಅಹಿಂಸೆಯ ತತ್ವಗಳು ಹೇಗೆ ಭಾರತವನ್ನು ಬ್ರಿಟಿಷರ ಆಳ್ವಿಕೆಯಿಂದ ಮುಕ್ತಗೊಳಿಸಲು ಪ್ರಬಲ ಅಸ್ತ್ರಗಳಾಗಿದ್ದವೋ, ಹಾಗೆಯೇ ವಿಶ್ವದ ಯಾವುದೇ ಭಾಗದಲ್ಲಾದರೂ ಹಿಂಸೆಯ ವಿರುದ್ಧ ಬಳಸಬಹುದಾದ ಪ್ರಮುಖ ಸಾಧನ ಎಂದು ನಮ್ಮ ದೇಶದ ಆಗಿನ ರಾಷ್ಟ್ರನಾಯಕರನೇಕರು ಅಭಿಪ್ರಾಯಪಟ್ಟಿದ್ದರು. ಹೀಗಾಗಿ 1950ರ ಉತ್ತರಾರ್ಧದಲ್ಲಿ ದೆಹಲಿಯಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನವನ್ನು ಸಮಾನ ಮನಸ್ಕ ಹಿರಿಯರು ಒಗ್ಗೂಡಿ ಪ್ರಾರಂಭಿಸಿದರು. ವಿಶ್ವದ ಎಲ್ಲ ರಾಷ್ಟ್ರಗಳು ತಮ್ಮ ಸಾಮಾಜಿಕ, ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ವ್ಯವಹಾರಗಳಲ್ಲಿ ಸತ್ಯ ಮತ್ತು ಅಹಿಂಸೆಯ ತತ್ವವನ್ನು ಅಳವಡಿಸುವಂತೆ ಪ್ರೇರೇಪಿಸುವುದು ಈ ಪ್ರತಿಷ್ಠಾನದ ಮೂಲ ಉದ್ದೇಶವಾಗಿತ್ತು. ಅಹಿಂಸೆಯ ಮೂಲಕ ಶಾಂತಿ ಸಾಧನೆ ಇದರ ಧ್ಯೇಯವಾಕ್ಯವಾಯಿತು.

ಪ್ರಾರಂಭಗೊಂಡ ಸ್ವಲ್ಪ ಕಾಲದಲ್ಲೇ, ಅಂದರೆ 1962ರಲ್ಲಿ ಇದು ಅಣ್ವಸ್ತ್ರಗಳ ತಯಾರಿಕೆ, ಪರೀಕ್ಷೆ ಹಾಗೂ ಬಳಕೆಗಳ ಸಾಧಕ-ಬಾಧಕಗಳ ಬಗ್ಗೆ ಒಂದು ಅಂತಾರಾಷ್ಟ್ರೀಯ ಸಮ್ಮೇಳನವನ್ನು ಆಯೋಜಿಸಿತ್ತೆಂಬುದು ಗಮನಾರ್ಹ ಸಂಗತಿ. ನಂತರ ಇದಕ್ಕೊಂದು ಸಂಸ್ಥಿಕ ಸಿಕ್ಕಿ 1963ರ ಏ. 24ರಂದು ನೋಂದಾವಣೆಗೊಂಡಿತು. ಆರ್.ಆರ್. ದಿವಾಕರ್ ಚೇರ್‌ಮನ್ ಆಗಿ, ಜಿ. ರಾಮಚಂದ್ರನ್ ಕಾರ್ಯದರ್ಶಿಯಾಗಿ, ರಾಷ್ಟ್ರಪತಿ ಡಾ। ಎಸ್. ರಾಧಾಕೃಷ್ಣನ್, ಉಪ ರಾಷ್ಟ್ರಪತಿ ಡಾ। ಜಾಕೀರ್ ಹುಸೇನ್, ಪ್ರಧಾನಿ ನೇಹರೂ, ಹಣಕಾಸು ಸಚಿವ ಮೊರಾರ್ಜಿ ದೇಸಾಯಿ ಹಾಗೂ ಹಿರಿಯ ರಾಷ್ಟ್ರೀಯ ನಾಯಕರಾಗಿದ್ದ ಸಿ. ರಾಜಗೋಪಾಲಾಚಾರಿ, ಜಯಪ್ರಕಾಶ್ ನಾರಾಯಣ, ಆಚಾರ್ಯ ಜೆ.ಬಿ. ಕೃಪಲಾನಿ, ಸುಚೇತಾ ಕೃಪಾಲಾನಿ, ಯು.ಎನ್. ದೇಬರ್, ಜಯರಾಮದಾಸ್ ದೌಲತ್‌ರಾಮ್, ಎಲ್.ಎಂ. ಶ್ರೀಕಾಂತ್ ಅವರಂತಹ ಘಟಾನುಘಟಿಗಳು ಸದಸ್ಯರಾಗಿದ್ದ ಒಂದು ಆಡಳಿತ ಮಂಡಳಿಯನ್ನು ರಚಿಸಲಾಯಿತು. ನಂತರ ಶಾಂತಿ ಪ್ರತಿಷ್ಠಾಪನೆಗಾಗಿ 1968ರಲ್ಲಿ ಧಾರ್ಮಿಕ ಗುರುಗಳ ಅಂತಾರಾಷ್ಟ್ರೀಯ ಸಮ್ಮೇಳನವನ್ನು, 1970ರಲ್ಲಿ ಪ್ರಸಕ್ತ ಸಂದರ್ಭಕ್ಕೆ ಗಾಂಧೀಜಿಯವರ ಪ್ರಸ್ತುತತೆ ಎಂಬ ವಿಷಯವಾಗಿ ಅಂತಾರಾಷ್ಟ್ರೀಯ ವಿಚಾರಸಂಕಿರಣವನ್ನು ಈ ಸಂಸ್ಥೆ ಏರ್ಪಡಿಸಿತು. ಹೀಗೆ ವಿಶ್ವಮಟ್ಟದಲ್ಲಿ ಕಾರ್ಯಕ್ರಮಗಳನ್ನು ಆಯೋಜಿಸುವುದರ ಜೊತೆಗೆ ನಮ್ಮ ದೇಶದಲ್ಲೂ ಜನಸಾಮಾನ್ಯರಲ್ಲಿ ಶಾಂತಿ ಪ್ರತಿಷ್ಠಾನದ ಧ್ಯೇಯೋದ್ದೇಶಗಳ ಬಗ್ಗೆ ಅರಿವು ಮೂಡಿಸುವ ಕಾರ್ಯಗಳನ್ನು ಕೈಗೊಳ್ಳಲಾಯಿತು.

ಗಾಂಧಿಯವರ ನಿಷ್ಠಾವಂತ ಅನುಯಾಯಿಗಳೂ, ಸ್ವಾತಂತ್ರ್ಯ ಹೋರಾಟಗಾರರೂ ಆಗಿದ್ದ ಕೆ.ಎಸ್. ನಾರಾಯಣಸ್ವಾಮಿ ಮತ್ತು ಕೇಂದ್ರ ಸಮಿತಿಯಲ್ಲಿ ಚೇರ್‌ಮನ್ ಆಗಿದ್ದ ಆರ್.ಆರ್. ದಿವಾಕರ್ ಅವರ ಪ್ರಯತ್ನದಿಂದಾಗಿ ಪ್ರತಿಷ್ಠಾನವು ಬೆಂಗಳೂರಿಗೂ ಆಗಮಿಸಿತು. ಇವರೊಂದಿಗೆ ಡಬ್ಲ್ಯು.ಎಚ್. ಹನುಮಂತಪ್ಪ, ನ್ಯಾಯವಾದಿಗಳಾಗಿದ್ದ ನಿಟ್ಟೂರು ಶ್ರೀನಿವಾಸರಾಯರು, ಡಿ.ಎಂ. ಚಂದ್ರಶೇಖರ್ ಮುಂತಾದ ಮಹನೀಯರು ಕರ್ನಾಟಕದಲ್ಲಿ ಪ್ರತಿಷ್ಠಾನ ಕಾರ್ಯನಿರ್ವಹಿಸಲು ಕಾರಣರಾದರು. 1989ರ ಏ. 27ರಂದು ಈ ಪ್ರತಿಷ್ಠಾನವು ವಿಧ್ಯುಕ್ತವಾಗಿ ಒಂದು ವ್ಯವಸ್ಥಿತ ಸಂಸ್ಥೆಯ ರೂಪವನ್ನು ಪಡೆಯಿತು. ಕೆ.ಎಸ್. ನಾರಾಯಣಸ್ವಾಮಿಯವರು ಅಧ್ಯಕ್ಷರಾದರು. ಎನ್. ಕೃಷ್ಣಸ್ವಾಮಿಯವರು ಉಪಾಧ್ಯಕ್ಷರಾದರು. ಸುಬ್ಬು ನರಸಿಂಹಯ್ಯ (ಕಾರ್ಯದರ್ಶಿ), ಎಚ್.ಎಸ್. ದೊರೆಸ್ವಾಮಿ (ಖಜಾಂಚಿ), ಡಾ। ಕೆ. ನಾಗಪ್ಪ ಆಳ್ವ, ಡಾ। ಮಮತಾಜ್ ಅಲಿ ಖಾನ್ ಹಾಗೂ ಎನ್. ವಿಜಯಲಕ್ಷ್ಮೀ (ಸದಸ್ಯರು) ಅವರಿದ್ದ ಆಡಳಿತ ಮಂಡಳಿ ರೂಪುಗೊಂಡಿತು. ನಂತರದ ವರ್ಷಗಳಲ್ಲಿ ಡಾ। ಕೆ.ವಿ. ಶ್ರೀಧರನ್, ಎಚ್.ಎಸ್. ದೊರೆಸ್ವಾಮಿ, ಕೌಜಲಗಿ, ತುಳಸೀದಾಸ್ ದಾಸ್‌ಗುಪ್ತಾ ಹಾಗೂ ಸತ್ಯವ್ರತ ಅವರು ಅಧ್ಯಕ್ಷರಾಗಿಯೂ ಕೆ.ಎಸ್. ನಾರಾಯಣ ಸ್ವಾಮಿ, ಪ್ರೊ। ಟಿ.ಆರ್. ದಾಸೇಗೌಡ, ಹೇಮಚಂದ್ರ ಬಸಪ್ಪ ಅವರು ಕಾರ್ಯದರ್ಶಿಗಳಾಗಿ ಪ್ರತಿಷ್ಠಾನದ ಧ್ಯೇಯೋದ್ದೇಶಗಳನ್ನು ಜನಸಾಮಾನ್ಯರಿಗೆ ತಲುಪಿಸುವ ನಿಟ್ಟಿನಲ್ಲಿ ಶ್ರಮಿಸಿದ್ದಾರೆ.

ಪ್ರಸ್ತುತ ಸಮಿತಿಯಲ್ಲಿ ಅನುಭವಿ ಹಿರಿಯರು ಸದಸ್ಯರುಗಳಾಗಿದ್ದು ಅವರೊಂದಿಗೆ ಯುವಶಕ್ತಿಯ ಪ್ರತೀಕವಾಗಿ ವೂಡೆ ಪಿ. ಕೃಷ್ಣ ಅಧ್ಯಕ್ಷರಾಗಿ, ಸಿದ್ಧಾರ್ಥ ಶರ್ಮ ಕಾರ್ಯದರ್ಶಿಯಾಗಿದ್ದಾರೆ. 'ಕೆ.ಎಸ್. ನಾರಾಯಣಸ್ವಾಮಿಯವರು ಪ್ರತಿಷ್ಠಾನಕ್ಕೆ ಭದ್ರ ಬುನಾದಿ ಹಾಕಿ ಇದನ್ನು ಬೆಳೆಸಿದ್ದಾರೆ. ಇಲ್ಲಿನ ಹಿರಿಯರ ಬೆಂಬಲ, ಮಾರ್ಗದರ್ಶನದೊಂದಿಗೆ ಗಾಂಧಿ ಸ್ಮಾರಕ ನಿಧಿಯ ಯೋಜನೆಗಳನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮುಖ್ಯವಾಗಿ ಶಾಲಾ-ಕಾಲೇಜುಗಳಲ್ಲಿ ಗಾಂಧಿವಿಚಾರಧಾರೆಯ ಪ್ರಚಾರ, ಪುಸ್ತಕ ಪ್ರಕಟಣೆ, ಡಬ್ಲ್ಯು.ಎಚ್. ಹನುಮಂತಪ್ಪ, ಶಾಮರಾಜ ಅಯ್ಯಂಗಾರ್, ಸರ್ದಾರ್ ವೆಂಕಟರಮಣಯ್ಯ, ಟಿ.ಆರ್. ಶಾಮಣ್ಣ ಮುಂತಾದವರ ದತ್ತಿನಿಧಿ ಕಾರ್ಯಕ್ರಮಗಳು ಹೀಗೆ ಹಲವಾರು ಯೋಜನೆಗಳನ್ನು ಪ್ರತಿಷ್ಠಾನ ಕೈಗೊಂಡಿದೆ' ಎನ್ನುತ್ತಾರೆ ಡಬ್ಲ್ಯು.ಪಿ. ಕೃಷ್ಣ ಮತ್ತು ಸಿದ್ಧಾರ್ಥ ಶರ್ಮ.

■ ಮುಗಿಯಿತು



ಪ್ರತಿಷ್ಠಾನದ ಒಂದು ಕಾರ್ಯಕ್ರಮ

ಉದಯವಾಣಿ

ಶುಕ್ರವಾರ 20 ಜೂನ್ 2008



ಭಾರತ ಸೇವಾದಲದ ಪದಾಧಿಕಾರಿಗಳು ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವ ವಿಶ್ವೇಶ್ವರ ಹೆಗಡೆ ಕಾಗೇರಿ ಅವರನ್ನು ಭೇಟಿ ಮಾಡಿ ಸಂಸ್ಥೆಯ ಕಾರ್ಯಚಟುವಟಿಕೆ ಕುರಿತು ವಿವರಿಸಿದರು. ಸಂಸ್ಥೆ ಅಧ್ಯಕ್ಷ ಎಚ್.ಎಂ. ಗುರುಸಿದ್ಧಸ್ವಾಮಿ, ಪ್ರಧಾನ ಕಾರ್ಯದರ್ಶಿ ಯು.ಆರ್. ಸಭಾಪತಿ, ಪೂಡೇ ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

**ಜೂನ್ 19, 2008** **ಉದಯವಾಣಿ**

## ಪ್ರತಿಭಾ ಪುರಸ್ಕಾರ



ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ದ್ವಿತೀಯ ಪಿಯುಸಿ ಕಾಮರ್ಸ್ ವಿಭಾಗದಲ್ಲಿ ರಾಜ್ಯಕ್ಕೆ ಪ್ರಥಮ ರ್‍ಯಾಂಕ್ ಪಡೆದಿರುವ ಇ.ಎಸ್. ಶ್ರೀನಿಧಿ ಹಾಗೂ ಸಿಇಟಿ ಇಂಜಿನಿಯರಿಂಗ್‌ನಲ್ಲಿ 8ನೇ ರ್‍ಯಾಂಕ್ ಪಡೆದಿರುವ ಆರ್. ಅಕ್ಷಯ್ ಅವರನ್ನು ಕಾಲೇಜಿನಲ್ಲಿ ಇತ್ತೀಚೆಗೆ ಸನ್ಮಾನಿಸಲಾಯಿತು. ಈ ಸಂದರ್ಭದಲ್ಲಿ ಜೆ. ರಾಮಕೃಷ್ಣ, ಸಂಸ್ಥೆಯ ಅಧ್ಯಕ್ಷ ಎನ್. ಆರ್. ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಪ್ರಾಂಶುಪಾಲ ಎಂ.ಆರ್. ಸಂತಾನಂ ಉಪಸ್ಥಿತರಿದ್ದರು.

ಸಂಜೆವಾಣಿ

ಗುರುವಾರ 19 ಜೂನ್ 2008

# ಸಮಾಜ ಸೇವಕರಾಗಿದ್ದ ಕೆ.ಎಂ. ನಂಜಪ್ಪ



ಡಾ.ಸಿ ಸೋಮಶೇಖರ್ ಅವರು ಮಾತಾನಾಡುತ್ತಿದ್ದಾರೆ. ಸಿ. ಬಸವರಾಜು, ಎನ್.ಪುಟ್ಟರುದ್ರ, ವೂಡೆ ಪಿ. ಕೃಷ್ಣ ಮತ್ತು ಟಿ.ವಿ. ಪ್ರಸನ್ನ ಕುಮಾರ್ ಚಿತ್ರದಲ್ಲಿದ್ದಾರೆ.

ಬೆಂಗಳೂರು ಜೂ.೧೯-"ಅವರ ವಿನಯ ಸಂಪನ್ನತೆ ಅತ್ಯಂತ ಶ್ಲಾಘನೀಯ. ಬಾಳಿನುದ್ದಕ್ಕೂ ಏನಗಿಂತ ಕಿರಿಯರಿಲ್ಲ ಎನ್ನುವಂತೆ ನಡೆದರು. ನಿಜವಾದ ಅರ್ಥದಲ್ಲಿ ಪೂರ್ಣಾವಧಿ ಸಮಾಜ ಸೇವಕರಾಗಿದ್ದುದರಿಂದಲೇ ೯೭ ವರ್ಷಗಳ ಕಾಲ ಆರೋಗ್ಯವಂತ ಜೀವನ ನಡೆಸಿದರು. ಅತ್ಯಂತ ಶಿಸ್ತು ಬದ್ಧ ಜೀವನ ನಡೆಸಿದ ಕೆ.ಎಂ. ನಂಜಪ್ಪನವರು ತಮ್ಮ ಮಹಾನ್ ವ್ಯಕ್ತಿತ್ವದ ಮೂಲಕ ಜನರ ಮನಸ್ಸಿನಲ್ಲಿ ಚಿರಸ್ಥಾಯಿಯಾಗಿ ಉಳಿದಿರುವ ಮಹಾನ್ ಸಾಧಕ. ಸಾರ್ವಜನಿಕ ರಂಗದಲ್ಲಿರುವವರು ಹೇಗೆ ತಮ್ಮ ಕೈ ಬಾಯಿಗಳನ್ನು ಶುದ್ಧವಾಗಿಟ್ಟು ಕೊಳ್ಳಬೇಕೆಂಬುದನ್ನು ತೋರಿಸಿ ಕೊಟ್ಟಿದ್ದಾರೆ. ಅವರ ಮಾರ್ಗದರ್ಶನದಲ್ಲಿ ವೂಡೆ ಪಿ. ಕೃಷ್ಣ ಅವರು ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳನ್ನು ಬೃಹತ್ ಪ್ರಮಾಣದಲ್ಲಿ ಕಟ್ಟಿ ಒಂದು ಮಹಾ ಕ್ರಾಂತಿಯನ್ನೇ ಮಾಡಿದ್ದಾರೆ. ಇಂತಹ ಮಹಾನುಭಾವರ ಹೆಸರಿನಲ್ಲಿ ಒಂದು ಸೂಕ್ತ ಸ್ಮಾರಕ ನಿರ್ಮಾಣ ಮಾಡೋಣ"ಎಂದು ಕರ್ನಾಟಕ ಪ್ರವಾಸೋದ್ಯಮ ಇಲಾಖೆ ನಿರ್ದೇಶಕ ಡಾ.ಸಿ.ಸೋಮಶೇಖರ ಅವರು ಕರೆ ನೀಡಿದರು.

ಇವರು ಇತ್ತೀಚೆಗೆ ಚಾಮರಾಜಪೇಟೆಯ ಬಿ.ಕೆ.ಮರಿಯಪ್ಪ ವಿದ್ಯಾರ್ಥಿ ನಿಲಯದ ಸಭಾಂಗಣದಲ್ಲಿ "ರಾಜ್ಯದ ಪ್ರಗತಿ ಬಳಗ"ದ ಆಶ್ರಯದಲ್ಲಿ ನಡೆದ ಕಾರ್ಯಕ್ರಮದಲ್ಲಿ ಇತ್ತೀಚೆಗೆ ನಿಧನರಾದ" ನುಡಿದಂತೆ ನಡೆದ, ನಡೆದಂತೆ ನುಡಿದ ಹಿರಿಯ ಚೇತನ ಕೆ.ಎಂ.ನಂಜಪ್ಪ"ಅವರಿಗೆ ಶ್ರದ್ಧಾಂಜಲಿ ಸಲ್ಲಿಸಿ ಮಾತನಾಡಿದರು.

'ಕೆ.ಎಂ.ನಂಜಪ್ಪನವರ ಭಾವಚಿತ್ರಕ್ಕೆ ಪುಷ್ಪ ನಮನ ಮಾಡಿ ಕಾರ್ಯಕ್ರಮ ಉದ್ಘಾಟಿಸಿದ ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌ.ಕಾರ್ಯದರ್ಶಿ ವೂಡೆ ಪಿ ಕೃಷ್ಣ ಅವರು "ಕೆ.ಎಂ.ನಂಜಪ್ಪ ಒಬ್ಬ ಅಜಾತ ಶತ್ರು. ಅನೇಕ ಸಂಸ್ಥೆಗಳನ್ನು ಕಟ್ಟಿದರು. ಅವರು ಸ್ಥಾಪಿಸಿದ ವಿದ್ಯಾಸಂಸ್ಥೆಗಳಲ್ಲಿ ಇಂದು ಲಕ್ಷಾಂತರ ಮಂದಿ ವಿದ್ಯಾಭ್ಯಾಸ ಮಾಡುತ್ತಿದ್ದು ಸಾವಿರಾರು ಮಂದಿ ಉದ್ಯೋಗಿಗಳಾಗಿದ್ದಾರೆ. ಇತರರಿಗಾಗಿ ಬದುಕುವವರು ಮಾತ್ರ ನಿಜವಾಗಿಯೂ ಜೀವಂತವಾಗಿರುತ್ತಾರೆ ಎಂಬ ಸ್ವಾಮಿ ವಿವೇಕಾನಂದರು ಹೇಳಿದ ಮಾತುಗಳು ಇವರಿಗೆ ಅನ್ವಯಿಸುತ್ತವೆ. ಬಸವಣ್ಣನವರ ಕಾಯಕ.ದಾಸೋಹ ತತ್ವಗಳನ್ನು ಕಾಯಾ. ವಾಚಾ.ಮನಸಾ, ಪಾಲಿಸಿದ ಕೆ.ಎಂ. ನಂಜಪ್ಪ ನಮಗೆ ಸದಾ ಆದರ್ಶರಾಗಿರುತ್ತಾರೆ" ಎಂದು ಹೇಳಿದರು.

ಅಧ್ಯಕ್ಷತೆ ವಹಿಸಿದ್ದ ಬಿ.ಕೆ ಮರಿಯಪ್ಪ ಧರ್ಮ ಸಂಸ್ಥೆಯ ವ್ಯ. ಧರ್ಮದರ್ಶಿ ಎನ್. ಪುಟ್ಟರುದ್ರ ಅವರು ರೆಡ್‌ಕ್ರಾಸ್ ಸಂಸ್ಥೆಯಲ್ಲಿ ಅವಿರತ ಸೇವೆ ಸಲ್ಲಿಸಿ, ರಕ್ತದಾನದ ಮಹತ್ವವನ್ನು ಜನರಿಗೆ ತಿಳಿಸಿಕೊಟ್ಟ ಕೆ.ಎಂ. ನಂಜಪ್ಪನವರನ್ನು ಶ್ಲಾಘಿಸಿ. ಬೆಂಗಳೂರಿನ ಮಹಾ ಪೌರರಾಗಿದ್ದಾಗ ಹಾಗೂ ಚೇಂಬರ್ ಆಫ್ ಕಾಮರ್ಸ್ ಅಧ್ಯಕ್ಷರಾಗಿದ್ದಾಗಲಾಗಲಿ ಎಂದೂ ಹೆಸರು ಕೆಡಿಸಿಕೊಳ್ಳಲಿಲ್ಲ ಎಂದು ಹೇಳಿದರು.

ಪತ್ರಕರ್ತ ಟಿ.ವಿ.ಪ್ರಸನ್ನ ಕುಮಾರ್, ಬಿ.ಎ.ಎಸ್.ವಿ(ನ) ಸಮಿತಿ ಅಧ್ಯಕ್ಷ ಕೆ.ರುದ್ರಪ್ಪ, ಎ.ಫ್.ಸ್.ವಿ.ಎನ್.ವಿ. ಸಂಘದ ಅಧ್ಯಕ್ಷ ಎ.ನಂಜುಂಡಪ್ಪ, ಕವಿ ಜರಗನಹಳ್ಳಿ ಶಿವಶಂಕರ್ ಹಾಗೂ ಕನ್ನಡ ಚಳವಳಿ ಮುಖಂಡ ಸಿ. ಬಸವರಾಜು ಮೊದಲಾದವರೂ ನುಡಿಕಾಣಿಕೆ ಸಲ್ಲಿಸಿದರು.

ರು.ಬಸಪ್ಪ ಅವರು ನಿರೂಪಿಸಿದರು. ಆರ್.ನೀಲಾಂಬಿಕೆ ವಚನ ಗಾಯನ ಮಾಡಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ನಾ.ಮಲ್ಲಿಕಾರ್ಜುನ ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಉದಯವಾಣಿ ಜೂನ್ 19, 2008

# ಆದರ್ಶ ವ್ಯಕ್ತಿತ್ವದ ನಂಜಪ್ಪ



ಚಾಮರಾಜಪೇಟೆ

**ಸ**ಮಾಜ ಸೇವಕ ಕೆ.ಎಂ. ನಂಜಪ್ಪನವರು ಆದರ್ಶ ವ್ಯಕ್ತಿತ್ವದ ಮೂಲಕ ಜನರ ಮನಸ್ಸಿನಲ್ಲಿ ಚಿರಸ್ಥಾಯಿಯಾಗಿ ಉಳಿದರುವ ಸಾರ್ವಜನಿಕ ರಂಗದಲ್ಲಿ ಶುದ್ಧವಾಗಿ ಬದುಕಿರುವುದನ್ನು ತೋರಿಸಿಕೊಟ್ಟಿದ್ದಾರೆ. ಅವರ ಮಾರ್ಗದರ್ಶನದಲ್ಲಿ ವೂಡೆ ಪಿ. ಕೃಷ್ಣ ಅವರು ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳನ್ನು ಬೃಹತ್ ಪ್ರಮಾಣದಲ್ಲಿ ಕಟ್ಟಿ ಒಂದು ಮಹಾಕಾಂತ್ರಿಯನ್ನೇ ಮಾಡಿದ್ದಾರೆ. ಇಂತಹ ಮಹಾನುಭಾವರ ಹೆಸರಿನಲ್ಲಿ ಒಂದು ಸೂಕ್ತ ಸ್ಮಾರಕ ನಿರ್ಮಾಣ ಮಾಡೋಣ ಎಂದು ಕರ್ನಾಟಕ ಪ್ರವಾಸೋದ್ಯಮ ಇಲಾಖೆ ನಿರ್ದೇಶಕ ಡಾ| ಸಿ. ಸೋಮಶೇಖರ್ ಕರೆ ನೀಡಿದರು.

ಇತ್ತೀಚೆಗೆ ಚಾಮರಾಜಪೇಟೆಯ ಬಿ.ಕೆ. ಮರಿಯಪ್ಪ ವಿದ್ಯಾರ್ಥಿ ನಿಲಯದ ಸಭಾಂಗಣದಲ್ಲಿ 'ರಾಜ್ಯ ಪ್ರಗತಿ ಬಳಗ'ದ ಆಶ್ರಯದಲ್ಲಿ ನಡೆದ ಕಾರ್ಯಕ್ರಮದಲ್ಲಿ ಇತ್ತೀಚೆಗೆ ನಿಧನರಾದ 'ನುಡಿದಂತೆ ನಡೆದ, ನಡೆದಂತೆ ನುಡಿದ ಹಿರಿಯ ಚೇತನಕ ಎ.ಎಂ. ನಂಜಪ್ಪ' ಅವರಿಗೆ ಶ್ರದ್ಧಾಂಜಲಿ ಸಲ್ಲಿಸಿ ಅವರು ಮಾತನಾಡಿದರು.

ಕೆ.ಎಂ. ನಂಜಪ್ಪನವರ ಭಾವಚಿತ್ರಕ್ಕೆ ಪುಷ್ಪ-ನಮನ ಸಲ್ಲಿಸಿ ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಮಾತನಾಡಿ, ಕೆ.ಎಂ. ನಂಜಪ್ಪ ಒಬ್ಬ ಅಜಾತಶತ್ರು. ಅನೇಕ ಸಂಸ್ಥೆಗಳನ್ನು ಕಟ್ಟಿದವರು. ಅವರು ಸ್ಥಾಪಿಸಿದ ವಿದ್ಯಾಸಂಸ್ಥೆಗಳಲ್ಲಿ ಇಂದು ಲಕ್ಷಾಂತರ ಮಂದಿ ವಿದ್ಯಾಭ್ಯಾಸ ಮಾಡುತ್ತಿದ್ದು ಸಾವಿರಾರು ಮಂದಿ ಉದ್ಯೋಗಿಗಳಾಗಿದ್ದಾರೆ. ಇತರರಿಗಾಗಿ ಬದುಕುವವರು ಮಾತ್ರ ನಿಜವಾಗಿಯೂ ಜೀವಂತರಾಗಿರುತ್ತಾರೆ ಎಂದು ಸ್ವಾಮಿ ವಿವೇಕಾನಂದರು ಹೇಳಿದ ಮಾತುಗಳು ಇವರಿಗೆ ಅನ್ವಯಿಸುತ್ತವೆ. ಬಸವಣ್ಣನವರ ಕಾಯಕ, ದಾಸೋಹ ತತ್ವಗಳನ್ನು ಕಾಯಾ, ವಾಚಾ, ಮನಸಾ ಪಾಲಿಸಿದ ಕೆ.ಎಂ. ನಂಜಪ್ಪ ನಮಗೆ ಸದಾ ಆದರ್ಶರಾಗಿರುತ್ತಾರೆ ಎಂದು ಹೇಳಿದರು.

ಬಿ.ಕೆ. ಮರಿಯಪ್ಪ ಧರ್ಮ ಸಂಸ್ಥೆಯ ವ್ಯವಸ್ಥಾಪಕ ಧರ್ಮದರ್ಶಿ ಎನ್. ಪುಟ್ಟರುದ್ರ ಮಾತನಾಡಿ, ರೆಡ್‌ಕ್ರಾಸ್ ಸಂಸ್ಥೆಯಲ್ಲಿ ಅವಿರತ ಸೇವೆ ಸಲ್ಲಿಸಿ ರಕ್ತದಾನದ ಮಹತ್ವವನ್ನು ಜನರಿಗೆ ತಿಳಿಸಿಕೊಟ್ಟ ಕೆ.ಎಂ. ನಂಜಪ್ಪನವರನ್ನು ಶ್ಲಾಘಿಸಿದರು.

ಪತ್ರಕರ್ತ ಟಿ.ಪಿ. ಪ್ರಸನ್ನಕುಮಾರ್, ಬಿ.ಎ.ಎಸ್.ವಿ. ಸಮಿತಿ ಅಧ್ಯಕ್ಷ ಕೆ. ರುದ್ರಪ್ಪ, ಎ.ಎಸ್.ವಿ.ಎನ್.ವಿ. ಸಂಘದ ಅಧ್ಯಕ್ಷ ಎ. ನಂಜುಂಡಪ್ಪ, ಕವಿ ಜರಗನಹಳ್ಳಿ ಶಿವಶಂಕರ್ ಹಾಗೂ ಕನ್ನಡ ಚಳವಳಿ ಮುಖಂಡ ಸಿ. ಬಸವರಾಜು ಮೊದಲಾದವರೂ ನುಡಿ ನಮನ ಸಲ್ಲಿಸಿದರು.

ಕನ್ನಡಪ್ರಭ, ಗುರುವಾರ, 19 ಜೂನ್ 2008

## ಸಚಿವರ ಭೇಟಿ

ಶಿಕ್ಷಣ ಸಚಿವ ವಿಶ್ವೇಶ್ವರ ಹೆಗಡೆ ಕಾಗೇರಿ ಅವರನ್ನು ಶಾಸಕರ ಭವನದಲ್ಲಿ ಭಾರತ ಸೇವಾದಲ ಸಂಸ್ಥೆ ಅಧ್ಯಕ್ಷ ಗುರುಸಿದ್ಧಸ್ವಾಮಿ, ಪ್ರಧಾನಕಾರ್ಯದರ್ಶಿ ಸಭಾಪತಿ ಭೇಟಿ ಮಾಡಿ ಸಂಸ್ಥೆಯ ಕಾರ್ಯಕ್ರಮ ವಿವರಿಸಿದರು. ಎಸ್. ಲಿಂಗಪ್ಪ, ಎಚ್.ಮಹೇಶ್‌ಗೌಡ ಇದ್ದರು.



ಪ್ರಜಾವಾಣಿ ಗುರುವಾರ 19ನೇ ಜೂನ್ 2008



ಭಾರತ ಸೇವಾದಳದ ಅಧ್ಯಕ್ಷ ಎಚ್.ಎಂ.ಗುರುಸಿದ್ದಸ್ವಾಮಿ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವ ವಿಶ್ವೇಶ್ವರ ಹೆಗಡೆ ಕಾಗೇರಿ ಅವರನ್ನು ಬೆಂಗಳೂರಿನಲ್ಲಿ ಭೇಟಿ ಮಾಡಿ ಸೇವಾದಳದ ಚಟುವಟಿಕೆ ಬಗ್ಗೆ ಚರ್ಚಿಸಿದರು.ಸೇವಾದಳ ಪ್ರಧಾನ ಕಾರ್ಯದರ್ಶಿ ಯು.ಆರ್.ಸಭಾಪತಿ, ಕೇಂದ್ರ ಸಮಿತಿ ಸದಸ್ಯ ಎಸ್.ಜಿ. ಮೇದಪ್ಪ, ಯೋಜನಾಧಿಕಾರಿ ಎಸ್.ಲಿಂಗಪ್ಪ, ವಿಭಾಗ ಸಂಘಟಕ ಜೆ.ಎಸ್. ನಾಯ್ಕ್, ಸಹಾಯಕ ಆಡಳಿತಾಧಿಕಾರಿ ಎಚ್.ಮಹೇಶ್ ಗೌಡ, ಖಜಾಂಚಿ ವೂಡೇ ಪಿ.ಕೃಷ್ಣ ಪಾಲ್ಗೊಂಡಿದ್ದರು.

ಸಂಜೆವಾಣಿ ಬುಧವಾರ 18 ಜೂನ್ 2008




ಕರ್ನಾಟಕ ಸ್ವಯಂ ರಕ್ತದಾನಿಗಳ ಒಕ್ಕೂಟ, ಪಬ್ಲಿಕ್ ರಿಲೇಷನ್ಸ್ ಕೌನ್ಸಿಲ್ ಆಫ್ ಇಂಡಿಯಾ, ಭಾರತೀಯ ರೆಡ್ ಕ್ರಾಸ್ ಹಾಗೂ ಚಿತ್ರಕಲಾ ಪರಿಷತ್ ಆಶ್ರಯದಲ್ಲಿ ಶನಿವಾರ "ವಿಶ್ವ ರಕ್ತದಾನಿಗಳ ದಿನಾಚರಣೆ" ಮಾಡಲಾಯಿತು. ಇದೇ ಸಂದರ್ಭದಲ್ಲಿ ರಕ್ತದಾನಿಗಳನ್ನ ಪ್ರೋತ್ಸಾಹಿಸಲು "ನೀನೆ ನೀನೆ" ಖ್ಯಾತಿ ನಟಿ ಐಶ್ವರ್ಯ ನಾಗ್, ನಟ, ನಿರ್ದೇಶಕ ಶಿವಧ್ವಜ್, ರೆಡ್‌ಕ್ರಾಸ್ ಉಪ ಸಭಾಧ್ಯಕ್ಷ ವೂಡೇ ಪಿ. ಕೃಷ್ಣ, ರಕ್ತದಾನಿಗಳ ಒಕ್ಕೂಟದ ಅಧ್ಯಕ್ಷ ರಾಜು ಚಂದ್ರಶೇಕರ್, ಪಬ್ಲಿಕ್ ರಿಲೇಷನ್ಸ್ ಕೌನ್ಸಿಲ್‌ನ ಮುಖ್ಯಸ್ಥ ಎಂ.ಬಿ. ಜಯರಾಂ ಹಾಗೂ ಎಂ. ಶಂಕರರಾವ್ ಉಪಸ್ಥಿತರಿದ್ದರು.

ಈ ಸಂಜೆ

ಮಂಗಳವಾರ, 17 ಜೂನ್, 2008




ರಾಜ್ಯ ಸ್ವಯಂ ರಕ್ತದಾನಿಗಳ ಒಕ್ಕೂಟ, ಪಬ್ಲಿಕ್ ರಿಲೇಷನ್ ಕೌನ್ಸಿಲ್ ಆಫ್ ಇಂಡಿಯಾ, ಭಾರತೀಯ ರೆಡ್‌ಕ್ರಾಸ್ ಹಾಗೂ ಚಿತ್ರಕಲಾ ಪರಿಷತ್ ಆಶ್ರಯದಲ್ಲಿ ಹಮ್ಮಿಕೊಂಡಿದ್ದ ರಕ್ತದಾನ ಶಿಬಿರವನ್ನು ನಟಿ ಐಶ್ವರ್ಯ ನಾಗ್, ನಟ ಶಿವಧ್ವಜ್, ಎಂ. ಶಂಕರರಾವ್, ಪ್ರೊ.ಕೆ.ಪಿ. ಕೃಷ್ಣ, ರಾಜುಚಂದ್ರಶೇಖರ್, ಎಂ.ಬಿ. ಜಯರಾಂ ವೀಕ್ಷಿಸುತ್ತಿರುವುದು.

ಈ ಸಂಜೆ

ಮಂಗಳವಾರ 17 ಜೂನ್ 2008



ಪ್ರಸಕ್ತ ಸಾಲಿನ ದ್ವಿತೀಯ ಪಿಯುಸಿ ಪರೀಕ್ಷೆಯ ಕಾಮರ್ಸ್ ವಿಭಾಗದಲ್ಲಿ ಶೇ.97 ಅಂಕ ಗಳಿಸಿ ರಾಜ್ಯಕ್ಕೆ ಪ್ರಥಮ ಸ್ಥಾನ ಪಡೆದ ಇ.ಎಸ್. ಶ್ರೀನಿಧಿ ಅವರನ್ನು ಶೇಷಾದ್ರಿಪುರಂ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಭಾರತೀಯ ವಿಜ್ಞಾನ ಸಂಸ್ಥೆಯ ನಿವೃತ್ತ ಪ್ರಾಧ್ಯಾಪಕ ಜಿ.ರಾಮಕೃಷ್ಣ ಅಭಿನಂದಿಸಿದರು. ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಅಧ್ಯಕ್ಷ ಪಂಡಿತಾರಾಧ್ಯ, ಪ್ರಾಂಶುಪಾಲ ಎಂ.ಆರ್. ಸಂತಾನಾಮ್, ಪ್ರೊ. ಪಿ.ಕೃಷ್ಣ ಉಪಸ್ಥಿತರಿದ್ದರು.

ಬೆಂಗಳೂರು ವಿಜಯ | ಮಂಗಳವಾರ, 17 ಜೂನ್ 2008

# ಸಂಸ್ಥೆಗಳನ್ನು ಕಟ್ಟಿ ಬೆಳೆಸಿದ ನಂಜಪ್ಪ ಬದುಕು ಅನುಕರಣೀಯ



ಕೆ.ಎಂ. ನಂಜಪ್ಪ ಅವರಿಗೆ ಶ್ರದ್ಧಾಂಜಲಿ ಸಮಾರಂಭದಲ್ಲಿ ವೂಡೆ ಪಿ. ಕೃಷ್ಣ ಸಿ. ಬಸವರಾಜು, ಎನ್. ಪುಟ್ಟರುದ್ರ, ಡಾ. ಸಿ. ಸೋಮಶೇಖರ್, ಟಿ.ಪಿ. ಪ್ರಸನ್ನಕುಮಾರ್ ಹಾಜರಿದ್ದರು.

ಬೆಂಗಳೂರು: ಹಲವಾರು ಸಂಸ್ಥೆಗಳನ್ನು ಕಟ್ಟಿ ಬೆಳಸಿದ ಕೆ.ಎಂ. ನಂಜಪ್ಪ ಅವರ ಬದುಕು ಅನುಕರಣೀಯ ಎಂದು ಕರ್ನಾಟಕ ಪ್ರವಾಸೋದ್ಯಮ ಇಲಾಖೆ ಮಾಜಿ ನಿರ್ದೇಶಕ ಡಾ. ಸಿ. ಸೋಮಶೇಖರ್ ಅಭಿಪ್ರಾಯಪಟ್ಟರು.

ಚಾಮರಾಜಪೇಟೆಯ ಬಿ.ಕೆ. ಮರಿಯಪ್ಪ ವಿದ್ಯಾರ್ಥಿ ನಿಲಯದ ಸಭಾಂಗಣದಲ್ಲಿ ರಾಜ್ಯ ಪ್ರಗತಿ ಬಳಗದ ಆಶ್ರಯದಲ್ಲಿ ನಡೆದ ಕಾರ್ಯಕ್ರಮದಲ್ಲಿ ಹಿರಿಯ ಚೇತನ ಕೆ.ಎಂ. ನಂಜಪ್ಪ ಅವರಿಗೆ ಶ್ರದ್ಧಾಂಜಲಿ ಸಲ್ಲಿಸಿ ಮಾತನಾಡಿದರು.

ಅತ್ಯಂತ ಶಿಸ್ತು ಬದ್ಧ ಜೀವನ ನಡೆಸಿದ ಕೆ.ಎಂ. ನಂಜಪ್ಪ ತಮ್ಮ ವ್ಯಕ್ತಿತ್ವದ ಮೂಲಕ ಜನರ ಮನಸ್ಸಿನಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾರೆ. ಸಾರ್ವಜನಿಕ ರಂಗದಲ್ಲಿರುವವರು ತಮ್ಮ ವ್ಯಕ್ತಿತ್ವವನ್ನು ಹೇಗೆ ರೂಪಿಸಿಕೊಳ್ಳಬೇಕೆಂಬುದನ್ನು ತೋರಿಸಿದ್ದಾರೆ ಎಂದರು.

ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಮಾತನಾಡಿ, ಕೆ.ಎಂ. ನಂಜಪ್ಪ ಸಾಕಷ್ಟು ಸಂಸ್ಥೆಗಳನ್ನು ಕಟ್ಟಿ ಬೆಳೆಸಿದ್ದಾರೆ. ಇತರರಿಗಾಗಿ ಬದುಕುವವರು ಮಾತ್ರ ನಿಜವಾಗಿಯೂ ಜೀವಂತವಾಗಿರುತ್ತಾರೆ ಎಂಬುದು ಸ್ವಾಮಿ ವಿವೇಕಾನಂದರ ಮಾತು ನಂಜಪ್ಪ ಅವರಿಗೆ ಅನ್ವಯಿಸುತ್ತದೆ ಎಂದು ಹೇಳಿದರು.

ಬಸವಣ್ಣನವರ ಕಾಯಕ, ದಾಸೋಹ ತತ್ತ್ವಗಳನ್ನು ಕಾಯಾ, ವಾಚಾ, ಮನಸಾ, ಪಾಲಿಸಿದ ಕೆ.ಎಂ. ನಂಜಪ್ಪ ನಮಗೆ ಸದಾ ಆದರ್ಶಪ್ರಾಯರು ಎಂದು ಹೇಳಿದರು.

ಬಿ.ಕೆ. ಮರಿಯಪ್ಪ ಧರ್ಮ ಸಂಸ್ಥೆಯ ಧರ್ಮದರ್ಶಿ ಎನ್. ಪುಟ್ಟರುದ್ರ ಮಾತನಾಡಿ, ನಂಜಪ್ಪ ಅವರು ಉತ್ತಮ ವ್ಯಕ್ತಿತ್ವ ಬೆಳೆಸಿಕೊಂಡಿದ್ದರು. ಬೆಂಗಳೂರಿನ ಮೇಯರ್ ಹಾಗೂ ಚೇಂಬರ್ ಆಫ್ ಕಾಮರ್ಸ್ ಅಧ್ಯಕ್ಷರಾದರೂ ತಮ್ಮ ವ್ಯಕ್ತಿತ್ವಕ್ಕೆ ಚ್ಯುತಿ ಬರುವಂತಹ ಯಾವುದೇ ಕೆಲಸ ಮಾಡಲಿಲ್ಲ ಎಂದರು.

ಪತ್ರಕರ್ತ ಟಿ.ಪಿ. ಪ್ರಸನ್ನಕುಮಾರ್, ಬಿ.ಎ.ಎಸ್.ವಿ. ಸಮಿತಿ ಅಧ್ಯಕ್ಷ ಕೆ. ರುದ್ರಪ್ಪ ಎ.ಎಸ್.ವಿ.ಎನ್.ವಿ. ಸಂಘದ ಅಧ್ಯಕ್ಷ ಎ. ನಂಜುಂಡಪ್ಪ, ಕವಿ ಜರಗನಹಳ್ಳಿ ಶಿವಶಂಕರ್ ಹಾಗೂ ಕನ್ನಡ ಚಳವಳಿ ಮುಖಂಡ ಸಿ. ಬಸವರಾಜು ಮತ್ತಿತರರು ಉಪಸ್ಥಿತರಿದ್ದರು.

ರು. ಬಸಪ್ಪ ಕಾರ್ಯಕ್ರಮ ನಿರೂಪಿಸಿದರು. ಆರ್. ನೀಲಾಂಬಿಕೆ ವಚನ ಗಾಯನ ಮಾಡಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ನಾ. ಮಲ್ಲಿಕಾರ್ಜುನ ಪ್ರಾಸ್ತಾವಿಕ ಭಾಷಣ ಮಾಡಿದರು.

ಕನ್ನಡಪ್ರಭ, ಸೋಮವಾರ, 16 ಜೂನ್ 2008



ಸನ್ಮಾನ

ದ್ವಿತೀಯ ಪಿಯುಸಿ ವಾಣಿಜ್ಯ ವಿಭಾಗದಲ್ಲಿ ರಾಜ್ಯಕ್ಕೆ ಪ್ರಥಮ ಸ್ಥಾನ ಪಡೆದ ಇ.ಎಸ್. ಶ್ರೀನಿಧಿಯನ್ನು ಶೇಷಾದ್ರಿಪುರ ಕಾಲೇಜಿನಲ್ಲಿ ಸನ್ಮಾನಿಸಲಾಯಿತು. ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ವೂಡೇ ಪಿ. ಕೃಷ್ಣ, ಎಂ.ಆರ್. ಸಂತಾನಮ್ ಹಾಜರಿದ್ದರು.

ಕನ್ನಡಪ್ರಭ, ಸೋಮವಾರ, 16 ಜೂನ್ 2008



**ಸನ್ಮಾನ**

ದ್ವಿತೀಯ ಪಿಯುಸಿ ವಾಣಿಜ್ಯ ವಿಭಾಗದಲ್ಲಿ ರಾಜ್ಯಕ್ಕೆ ಪ್ರಥಮ ಸ್ಥಾನ ಪಡೆದ ಇ.ಎಸ್. ಶ್ರೀನಿಧಿಯನ್ನು ಶೇಷಾದ್ರಿಪುರ ಕಾಲೇಜಿನಲ್ಲಿ ಸನ್ಮಾನಿಸಲಾಯಿತು. ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ವೂಡೇ ಪಿ. ಕೃಷ್ಣ, ಎಂ.ಆರ್. ಸಂತಾನಮ್ ಹಾಜರಿದ್ದರು.

ಸಂಯುಕ್ತ ಕರ್ನಾಟಕ ಬೆಂಗಳೂರು
15-6-2008

# 'ಕಾಯಕ, ದಾಸೋಹ ತತ್ವ ಪಾಲಿಸಿದವರು ನಂಜಪ್ಪ'

ಬೆಂಗಳೂರು, ಜೂ. 14–ಅತ್ಯಂತ ಶಿಸ್ತುಬದ್ಧ ಜೀವನ ನಡೆಸಿದ ಕೆ.ಎಂ. ನಂಜಪ್ಪ ಅವರು, ಸಾರ್ವಜನಿಕ ರಂಗದಲ್ಲಿರುವವರು ಹೇಗೆ ತಮ್ಮ ಕೈ, ಬಾಯಿಗಳನ್ನು ಶುದ್ಧವಾಗಿಟ್ಟುಕೊಳ್ಳಬೇಕೆಂಬುದನ್ನು ತೋರಿಸಿಕೊಟ್ಟಿದ್ದಾರೆ ಎಂದು ಹೇಳಿದವರು ರಾಜ್ಯ ಪ್ರವಾಸೋದ್ಯಮ ಇಲಾಖೆ ನಿರ್ದೇಶಕ ಡಾ.ಸಿ.ಸೋಮಶೇಖರ್.

ರಾಜ್ಯ ಪ್ರಗತಿ ಬಳಗದ ಆಶ್ರಯದಲ್ಲಿ ಇತ್ತೀಚೆಗೆ ನಡೆದ ಕಾರ್ಯಕ್ರಮದಲ್ಲಿ ಕೆ.ಎಂ.ನಂಜಪ್ಪನವರಿಗೆ ಶ್ರದ್ಧಾಂಜಲಿ ಸಲ್ಲಿಸಿ ಅವರು ಮಾತನಾಡಿ, ಬಾಳಿನುದ್ದಕ್ಕೂ ಎನಗಿಂತ ಕಿರಿಯರಿಲ್ಲ ಎನ್ನುವಂತೆ ನಡೆದರು, ಇಂತಹ ಮಹಾನುಭಾವರ ಹೆಸರಲ್ಲಿ ಸ್ಮಾರಕ ನಿರ್ಮಾಣ ಮಾಡೋಣ ಎಂದು ತಿಳಿಸಿದರು.

ನಂಜಪ್ಪನವರ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಿ ಮಾತನಾಡಿದ ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಮಾತನಾಡಿ, ನಂಜಪ್ಪ ಓರ್ವ ಅಜಾತಶತ್ರು. ಅನೇಕ ಸಂಸ್ಥೆಗಳನ್ನು ಕಟ್ಟಿದರು. ಬಸವಣ್ಣನವರ ಕಾಯಕ,ದಾಸೋಹ ತತ್ವಗಳನ್ನು ಕಾಯಾ, ವಾಚಾ ಮನಸಾ ಪಾಲಿಸಿದವರು ಎಂದು ನುಡಿದರು.

ಬಿ.ಕೆ.ಮರಿಯಪ್ಪ ಧರ್ಮ ಸಂಸ್ಥೆಯ ವ್ಯ.ಧರ್ಮದರ್ಶಿ ಎನ್. ಪುಟ್ಟರುದ್ರ ಅಧ್ಯಕ್ಷತೆ ವಹಿಸಿದ್ದರು. ಪತ್ರಕರ್ತ ಟಿ.ಪಿ. ಪ್ರಸನ್ನಕುಮಾರ್, ಬಿ.ಎ.ಎಸ್.ವಿ.(ನ)ಸಮಿತಿ ಅಧ್ಯಕ್ಷ ಕೆ.ರುದ್ರಪ್ಪ, ಎ.ಎಸ್.ವಿ.ಎನ್.ವಿ.ಸಂಘದ ಅಧ್ಯಕ್ಷ ಎ. ನಂಜುಂಡಪ್ಪ, ಕವಿ ಜರಗನಹಳ್ಳಿ ಶಿವಶಂಕರ್, ಕನ್ನಡ ಚಳವಳಿ ಮುಖಂಡ ಸಿ.ಬಸವರಾಜು ಮತ್ತಿತರರು ಮಾತನಾಡಿದರು.

ಆರ್.ನೀಲಾಂಬಿಕೆ ವಚನಗಾಯನ ನಡೆಸಿಕೊಟ್ಟರು. ರು.ಬಸಪ್ಪ ನಿರೂಪಿಸಿದರು. ನಾ. ಮಲ್ಲಿಕಾರ್ಜುನ ಪ್ರಾಸ್ತಾವಿಕವಾಗಿ ಮಾತನಾಡಿದರು.

ಭಾನುವಾರ, 15 ಜೂನ್ 2008

ಕನ್ನಡಪ್ರಭ



## ಶ್ರದ್ಧಾಂಜಲಿ

ಪ್ರಗತಿ ಬಳಗ ಏರ್ಪಡಿಸಿದ್ದ ದಿ| ಕೆ.ಎಂ. ನಂಜಪ್ಪ ಶ್ರದ್ಧಾಂಜಲಿ ಸಭೆಯಲ್ಲಿ ದಿವಂಗತರ ಭಾವಚಿತ್ರಕ್ಕೆ ಪುಷ್ಪನಮನ ಮಾಡಲಾಯಿತು. ಪ್ರೊ| ಪಿ. ಕೃಷ್ಣ, ಡಾ| ಸಿ. ಸೋಮಶೇಖರ್, ಶಿವಕುಮಾರ್, ಮಲ್ಲಿಕಾರ್ಜುನ ಇದ್ದರು.

# ದೇಶಕ್ಕೆ 80 ಲಕ್ಷ ರಕ್ತದಾನಿಗಳು ಅಗತ್ಯ

**ವಿಕ ಸುದ್ದಿಲೋಕ**

ಬೆಂಗಳೂರು: ರಾಜ್ಯದಲ್ಲಿ ವಾರ್ಷಿಕ 5.5 ಲಕ್ಷದಷ್ಟು ರಕ್ತ ದಾನಿಗಳ ಅಗತ್ಯವಿದ್ದು ಪ್ರಸ್ತುತ ಕೇವಲ 3.63 ಯೂನಿಟ್ಸ್ ರಕ್ತ ಸಂಗ್ರಹವಾಗುತ್ತಿದೆ ಎಂದು ಕರ್ನಾಟಕ ಸ್ವಯಂ ರಕ್ತ ದಾನಿಗಳ ಒಕ್ಕೂಟದ ಅಧ್ಯಕ್ಷ ರಾಜು ಚಂದ್ರಶೇಖರ್ ಹೇಳಿದ್ದಾರೆ.

ರಾಜ್ಯ ಸ್ವಯಂ ರಕ್ತದಾನಿಗಳ ಒಕ್ಕೂಟ, ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಮತ್ತು ಪಬ್ಲಿಕ್ ರಿಲೇಷನ್ಸ್ ಕೌನ್ಸಿಲ್ ಆಫ್ ಇಂಡಿಯಾ ಸಹಯೋಗದೊಂದಿಗೆ 'ವಿಶ್ವ ರಕ್ತದಾನಿಗಳ ದಿನಾಚರಣೆ' ಪ್ರಯುಕ್ತ ಶನಿವಾರ ಆಯೋಜಿಸಲಾಗಿದ್ದ ಸಮಾರಂಭದಲ್ಲಿ ಪಾಲ್ಗೊಂಡು ಮಾತನಾಡಿದರು.

ರಾಜ್ಯವಷ್ಟೇ ಅಲ್ಲ ವಿಶ್ವ ಮಟ್ಟದಲ್ಲಿ ವಾರ್ಷಿಕ 15 ಕೋಟಿ ಮತ್ತು ರಾಷ್ಟ್ರಮಟ್ಟದಲ್ಲಿ 80 ಲಕ್ಷದಷ್ಟು ರಕ್ತದಾನಿಗಳ ಅಗತ್ಯವಿದೆ. ಆ ಬೇಡಿಕೆಯನ್ನು ಪೂರೈಸಬೇಕಾದರೆ ಪ್ರತಿಯೊಬ್ಬರೂ ಸ್ವಯಂ ಪ್ರೇರಿತರಾಗಿ ರಕ್ತದಾನ ಮಾಡಬೇಕು ಎಂದು ನುಡಿದರು.

ರಕ್ತದಾನ ಮಾಡಿದರೆ ದೇಹದ ತೂಕ ಕಡಿಮೆಯಾಗುತ್ತದೆ, ಮತ್ತೆ ರಕ್ತ ಉತ್ಪತ್ತಿಯಾಗುವುದಿಲ್ಲ – ಇವೇ ಮೊದಲಾದವು ತಪ್ಪು ಕಲ್ಪನೆಗಳು. ಆರೋಗ್ಯವಂತ ವ್ಯಕ್ತಿ ಒಂದು ವರ್ಷಕ್ಕೆ ಕನಿಷ್ಠ ಎರಡು ಬಾರಿ ರಕ್ತದಾನ ಮಾಡಬಹುದು ಎಂದರು.

ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ ಕರ್ನಾಟಕ ಘಟಕದ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ 'ರಕ್ತದಾನಿಗಳಿಗೆ ಕೃತಜ್ಞತೆ ಸಲ್ಲಿಸುವ ಉದ್ದೇಶದಿಂದ ಈ ದಿನವನ್ನು ಆಚರಿಸಲಾಗುತ್ತದೆ. ಇತರೆ ಅಗತ್ಯ ವಸ್ತುಗಳಂತೆ ರಕ್ತವನ್ನು ಯಾವುದೇ ಕಾರ್ಖಾನೆಯಲ್ಲಿ ಉತ್ಪಾದಿಸಲು ಸಾಧ್ಯವಿಲ್ಲ. ಈ ಹಿನ್ನೆಲೆಯಲ್ಲಿ ರಕ್ತದಾನದ ಮಹತ್ವವನ್ನು ಪ್ರತಿಯೊಬ್ಬರೂ ಅರಿಯಬೇಕು' ಎಂದು ಕರೆ ನೀಡಿದರು.

ನಟಿ ಐಶ್ವರ್ಯ ನಾಗ್, ನಟ ಶಿವಧ್ವಜ್, ಚಿತ್ರಕಲಾ ಪರಿಷತ್ ಅಧ್ಯಕ್ಷ ಟಿ. ಪ್ರಭಾಕರ್, ಪಬ್ಲಿಕ್ ರಿಲೇಷನ್ಸ್ ಕೌನ್ಸಿಲ್ ಆಫ್ ಇಂಡಿಯಾ ಅಧ್ಯಕ್ಷ ಎಂ.ಬಿ. ಜಯರಾಂ, ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ ಪ್ರಧಾನ ಕಾರ್ಯದರ್ಶಿ ಡಾ. ಎನ್.ಜೆ. ನಾರಾಯಣ ಮತ್ತಿತರರು ಪಾಲ್ಗೊಂಡಿದ್ದರು. ಇದೇ ಸಂದರ್ಭದಲ್ಲಿ ಆಯೋಜಿಸಲಾಗಿದ್ದ ರಕ್ತದಾನ ಶಿಬಿರದಲ್ಲಿ ನೂರಾರು ಮಂದಿ ರಕ್ತ ದಾನ ಮಾಡಿದರು.

ವಿಕ ಚಿತ್ರಲೋಕ



ವಿಶ್ವ ರಕ್ತದಾನಿಗಳ ದಿನಾಚರಣೆ ಪ್ರಯುಕ್ತ ಶನಿವಾರ ಆಯೋಜಿಸಿದ್ದ ರಕ್ತದಾನ ಶಿಬಿರದಲ್ಲಿ ಕಾಲೇಜು ವಿದ್ಯಾರ್ಥಿಗಳು ರಕ್ತದಾನ ಮಾಡಿದರು. ಐಶ್ವರ್ಯ ನಾಗ್, ಶಿವಧ್ವಜ್, ರಾಜು ಚಂದ್ರಶೇಖರ್, ವೂಡೇ ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

# ರಕ್ತ ನೀಡಿ, ಜೀವ ಉಳಿಸಿ: ಅನಗತ್ಯ ಭಯ ಬೇಡ

**ರಶ್ಮಿ ಬೇಲೂರು ವಿಕ ಸುದ್ದಿಲೋಕ**

ಬೆಂಗಳೂರು: ಕನ್ನಡ ರಾಜ್ಯೋತ್ಸವ, ಸ್ವಾತಂತ್ರ್ಯ ದಿನಾಚರಣೆ ಸೇರಿದಂತೆ, ರಾಜಕಾರಣಿ, ಚಿತ್ರನಟ ಇಲ್ಲವೇ ಕ್ರೀಡಾಪಟುಗಳ ಹುಟ್ಟುಹಬ್ಬದಂದು 'ರಕ್ತದಾನ ಶಿಬಿರ' ಹಮ್ಮಿಕೊಳ್ಳುವುದು ಇತ್ತೀಚಿನ ದಿನಗಳಲ್ಲಿ ಸಾಮಾನ್ಯವಾಗಿ ಬಿಟ್ಟಿದೆ.

ಆದರೆ, ಇಂಥ ಶಿಬಿರ ಏರ್ಪಡಿಸುವ ಬಹುತೇಕರಿಗೆ ಅದರ ಮಹತ್ವ, ರಕ್ತದ ಕೊರತೆ / ಬೇಡಿಕೆ ಪ್ರಮಾಣ, ಯಾರು ರಕ್ತದಾನ ಮಾಡಬಹುದು ಹಾಗೂ ತಮ್ಮ ರಕ್ತದ ಗುಂಪು ಯಾವುದು ಎಂಬ ಮಾಹಿತಿ ಇರುವುದಿಲ್ಲ. ಆ ಕುರಿತು ಜಾಗೃತಿ ಮೂಡಿಸಲೆಂದೇ ಪ್ರತಿ ವರ್ಷ 'ವಿಶ್ವ ರಕ್ತದಾನಿಗಳ ದಿನ'ವನ್ನು ಜೂ.14ರಂದು ಆಚರಿಸಲಾಗುತ್ತದೆ. ರಕ್ತದ ಗುಂಪುಗಳನ್ನು ಸಂಶೋಧಿಸಿದ ಡಾ. ಕಾರ್ಲ್ ಲ್ಯಾಂಡ್‌ಸ್ಟೈನರ್‌ನ ಹುಟ್ಟುಹಬ್ಬ ಕೂಡ ಇದೇ ದಿನ.

**ಯಶಸ್ವಿ ರಾಷ್ಟ್ರಗಳು**

ಆಸ್ಟ್ರೇಲಿಯಾ, ಆಸ್ಟ್ರಿಯಾ, ಬೆಲ್ಜಿಯಂ, ಬೋಟ್ಸ್ವಾನಾ, ಬುರುಂಡಿ, ಬ್ರುನೈ, ಕೆನಡಾ, ಕ್ಯೂಬಾ, ಡೆನ್ಮಾರ್ಕ್, ಫ್ರಾನ್ಸ್, ಇಟಲಿ, ಜಪಾನ್, ಲಕ್ಸೆಂಬರ್ಗ್, ನಾರ್ವೆ, ದಕ್ಷಿಣ ಆಫ್ರಿಕಾ, ಹಂಗರಿ, ಸ್ವೀಡನ್ ಸೇರಿದಂತೆ 49 ರಾಷ್ಟ್ರಗಳು ಸ್ವಯಂ ರಕ್ತ ದಾನದಲ್ಲಿ ಶೇ.100ರಷ್ಟು ಯಶಸ್ಸು ಸಾಧಿಸಿವೆ.

ಈ ಸಾಲಿನಲ್ಲಿ ಭಾರತವನ್ನೂ ಸೇರಿಸಬೇಕು ಎಂಬುದು ಭಾರತೀಯ ರೆಡ್ ಕ್ರಾಸ್ ಸೊಸೈಟಿ ಸೇರಿದಂತೆ ಕೋಟ್ಯಂತರ ರಕ್ತದಾನಿಗಳ ಆಸೆ.

> **ನೋಂದಾಯಿಸಿ...**
>
> ರಕ್ತದಾನಿಗಳಾಗಿ ಹೆಸರು ನೋಂದಾಯಿಸುವ ಇಚ್ಛೆಯುಳ್ಳವರು ಕರ್ನಾಟಕ ಸ್ವಯಂ ರಕ್ತದಾನಿಗಳ ಒಕ್ಕೂಟ (ದೂ:080-23234048), ಸರಕಾರದಿಂದ ಮಾನ್ಯತೆ ಹಾಗೂ ಸರಕಾರಿ ಆಸ್ಪತ್ರೆಗಳ ಬ್ಲಡ್ ಬ್ಯಾಂಕ್‌ಗಳು, ರೆಡ್ ಕ್ರಾಸ್ ಸೊಸೈಟಿ, ಲಯನ್ಸ್ ರಕ್ತ ನಿಧಿ, ಜೈನ್ ಆಸ್ಪತ್ರೆ ವಸಂತ ನಗರ (9845315670), ಬಿಜಿಎಸ್ ಗ್ಲೋಬಲ್ ಆಸ್ಪತ್ರೆ (9916144475)ಯನ್ನು ಸಂಪರ್ಕಿಸಬಹುದು.

**ಅರ್ಹತೆ/ಅನರ್ಹತೆ**

18ರಿಂದ 60 ವರ್ಷ ವಯಸ್ಸಿನ 45ಕೆ.ಜಿ.ಗಿಂತ ಹೆಚ್ಚು ದೇಹ ತೂಕವುಳ್ಳವರು, ಒಂದು ವರ್ಷದಿಂದ ಯಾವುದೇ ಗಂಭೀರ ಆರೋಗ್ಯ ಸಮಸ್ಯೆಯಿಂದ ಬಳಲದವರು, 3 ತಿಂಗಳಿನಿಂದ ರಕ್ತದಾನ ಮಾಡದೆ ಇರುವವರು ಹಾಗೂ ರಕ್ತದಲ್ಲಿ ಶೇ.12.5ರಷ್ಟು ಹಿಮೋಗ್ಲೋಬಿನ್ ಅಂಶ ಇರುವವರು ರಕ್ತ ದಾನಕ್ಕೆ ಅರ್ಹರಾಗಿರುತ್ತಾರೆ.

ಅನಾರೋಗ್ಯ, ರಕ್ತದ ಕೊರತೆಯಿಂದ ಬಳಲುತ್ತಿರುವವರು, ಗರ್ಭಿಣಿಯರು, ಸ್ತನ್ಯಪಾನ ಮಾಡಿಸುತ್ತಿರುವ ತಾಯಂದಿರು, ಹೃದ್ರೋಗ, ಅಧಿಕ ಅಥವಾ ಕಡಿಮೆ ರಕ್ತದೊತ್ತಡ, ಮಧುಮೇಹಿಗಳು ಹಾಗೂ ಯಾವುದೇ ಆ್ಯಂಟಿಬಯೋಟಿಕ್ ಸೇವಿಸುತ್ತಿರುವವರು ರಕ್ತದಾನ ಮಾಡುವಂತಿಲ್ಲ. ಎಚ್‌ಐವಿ/ ಸಿಫಿಲಿಸ್ ಸೇರಿದಂತೆ ಯಾವುದೇ ಕಾಯಿಲೆಗೆ ತುತ್ತಾದವರು ಮಾಡಕೂಡದು.

**ಇಲ್ಲಿದೆ ಸಮಸ್ಯೆ**

ವಿಶ್ವದಾದ್ಯಂತ ಪ್ರತಿ ವರ್ಷ 5 ಲಕ್ಷ ಮಹಿಳೆಯರು ಹೆರಿಗೆ ವೇಳೆ ಸಾವಿಗೀಡಾಗುತ್ತಿದ್ದು, ಅವರಲ್ಲಿ ಶೇ.25ರಷ್ಟು ಮಂದಿ ರಕ್ತಸ್ರಾವದಿಂದಾಗಿ ಅಸು ನೀಗುತ್ತಾರೆ. ಇದಲ್ಲದೆ, ರಸ್ತೆ ಅಪಘಾತದ ವೇಳೆ ರಕ್ತದ ಅಗತ್ಯ ಅಧಿಕವಾಗಿರುತ್ತದೆ. ಹೀಗಾಗಿ, ರಕ್ತ ಲಭ್ಯವಿದ್ದಲ್ಲಿ ಅದೆಷ್ಟೋ ಜೀವಗಳು ಉಳಿಯುತ್ತವೆ ಎಂಬುದು ಕರ್ನಾಟಕ ಸ್ವಯಂ ರಕ್ತ ದಾನಿಗಳ ಒಕ್ಕೂಟದ ಅಭಿಪ್ರಾಯ.

**ಭ್ರಮೆ ಬಿಡಿ**

ರಕ್ತದಾನ ಮಾಡಿದರೆ ಬಲಹೀನತೆ, ದೇಹದ ತೂಕ ಕಡಿಮೆಯಾಗುತ್ತದೆ. ದಾನಿಯ ಗುಣ ರಕ್ತ ಪಡೆದವನಿಗೆ ಬರುತ್ತದೆ. ಪತ್ನಿಗೆ ರಕ್ತ ನೀಡಿದಲ್ಲಿ ಪತಿ ಆಕೆಗಿಂತ ಮೊದಲು ಸಾಯುತ್ತಾನೆ ಸೇರಿದಂತೆ ಹಲವು ಅರ್ಥವಿಲ್ಲದ ಮೂಢನಂಬಿಕೆಗಳು ಸಾರ್ವಜನಿಕರಲ್ಲಿವೆ.

ಜನ ಇಂಥ ನಂಬಿಕೆಗಳಿಂದ ಹೊರ ಬರುವವರೆಗೂ ರಕ್ತದ ಕೊರತೆ ನೀಗಿಸಲು ಸಾಧ್ಯವಿಲ್ಲ. ರಕ್ತ ಎಷ್ಟು ಸುರಕ್ಷಿತ ಎಂಬುದನ್ನು ಪರೀಕ್ಷಿಸಿದ ನಂತರವಷ್ಟೇ ಬೇರೆಯವರಿಗೆ ನೀಡಲಾಗುತ್ತದೆ. ಧಾರ್ಮಿಕ ಕ್ಷೇತ್ರಗಳಲ್ಲಿ ರಕ್ತದಾನ ಘಟಕ ತೆರೆಯಬೇಕು. ದೇವರ ಹೆಸರಿನಲ್ಲಿ ಕೂದಲು ಕೊಡುವುದಕ್ಕಿಂತ ರಕ್ತ ಕೊಡುವುದು ಮಹಾದಾನ ಎನ್ನುತ್ತಾರೆ ರಕ್ತದಾನಿಗಳ ಒಕ್ಕೂಟದ ಅಧ್ಯಕ್ಷ ರಾಜು ಚಂದ್ರಶೇಖರ್.

ಭಾನುವಾರ
15ನೇ ಜೂನ್ 2008
ಪ್ರಜಾವಾಣಿ




ಶನಿವಾರ ಬೆಂಗಳೂರಿನಲ್ಲಿ ನಡೆದ ವಿಶ್ವ ರಕ್ತದಾನಿಗಳ ದಿನಾಚರಣೆಯಲ್ಲಿ ಹಲವರು ರಕ್ತದಾನ ಮಾಡಿದರು. ಚಲನಚಿತ್ರ ಕಲಾವಿದರಾದ ಐಶ್ವರ್ಯನಾಗ್ ಹಾಗೂ ಶಿವಧ್ವಜ್ ರಕ್ತದಾನ ಶಿಬಿರ ಉದ್ಘಾಟಿಸಿದರು. ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಉಪಾಧ್ಯಕ್ಷ ವೂಡಿ ಪಿ.ಕೃಷ್ಣ, ಕರ್ನಾಟಕ ಸ್ವಯಂಪ್ರೇರಿತ ರಕ್ತದಾನಿಗಳ ಸಂಘದ ಅಧ್ಯಕ್ಷ ರಾಜು ಚಂದ್ರಶೇಖರ್, ಪಿಆರ್‌ಸಿಐನ ಮುಖ್ಯಸ್ಥ ಎಂ.ಬಿ.ಜಯರಾಮ್ ಇನ್ನಿತರರು ಚಿತ್ರದಲ್ಲಿದ್ದಾರೆ. -ಪ್ರಜಾವಾಣಿ ಚಿತ್ರ

# ಸ್ವಯಂಪ್ರೇರಿತ ರಕ್ತದಾನ ಮಾಡಲು ಕರೆ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಸಾರ್ವಜನಿಕರು ಸ್ವಯಂ ಪ್ರೇರಿತರಾಗಿ ರಕ್ತದಾನ ಮಾಡಿದರೆ ಮಾತ್ರ ತುರ್ತು ಸಂದರ್ಭದಲ್ಲಿ ಅಗತ್ಯ ವಿದ್ದವರಿಗೆ ರಕ್ತ ಒದಗಿಸಿ ಜೀವ ಉಳಿಸಲು ಸಾಧ್ಯ ಎಂದು ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡೇ ಪಿ.ಕೃಷ್ಣ ಶನಿವಾರ ಇಲ್ಲಿ ಹೇಳಿದರು.

ವಿಶ್ವ ರಕ್ತದಾನಿಗಳ ದಿನಾಚರಣೆಯಲ್ಲಿ ಮಾತನಾಡಿದ ಅವರು, 'ತುರ್ತು ಸಂದರ್ಭದಲ್ಲಿ ಅಗತ್ಯವಾದ ರಕ್ತ ಲಭ್ಯವಾಗದೇ ವಿಶ್ವದಾದ್ಯಂತ ನೂರಾರು ಜನರು ಸಾವಿಗೀಡಾಗುತ್ತಿದ್ದಾರೆ. ಹೀಗಾಗಿ ರಕ್ತದಾನಿಗಳು ಸ್ವಯಂಪ್ರೇರಿತರಾಗಿಯೇ ಮುಂದೆ ಬರಬೇಕು. ಆಗಷ್ಟೇ ಈ ಸಮಸ್ಯೆಗೆ ಪರಿಹಾರ ಸಾಧ್ಯ' ಎಂದರು.

ಬೆಂಗಳೂರು ನಗರದಲ್ಲಿರುವ ರೆಡ್ ಕ್ರಾಸ್ ಸಂಸ್ಥೆಯ ಬೇರೆ ಬೇರೆ ವಿಭಾಗಗಳಿಂದ ವಾರ್ಷಿಕವಾಗಿ 8,400 ಯೂನಿಟ್ ಸಂಗ್ರಹವಾಗುತ್ತವೆ. ಅವುಗಳಲ್ಲಿ ಶೇ 98ರಷ್ಟು ರಕ್ತವನ್ನು ಅಗತ್ಯವಾದ ಪರೀಕ್ಷೆ ಮಾಡಿದ ನಂತರ ತುರ್ತು ಅಗತ್ಯವಿದ್ದವರ ಸೇವೆಗೆ ಬಳಕೆಯಾಗುತ್ತದೆ ಎಂದರು.

ಕರ್ನಾಟಕ ಸ್ವಯಂ ಪ್ರೇರಿತ ರಕ್ತದಾನಿಗಳ ಸಂಘದ ಅಧ್ಯಕ್ಷ ರಾಜು ಚಂದ್ರಶೇಖರ್ ಮಾತನಾಡಿ, ವಿಶ್ವದ 6,500 ದಶಲಕ್ಷ ಜನಸಂಖ್ಯೆಯಲ್ಲಿ ಕೇವಲ 850 ದಶಲಕ್ಷ ಜನರು ಮಾತ್ರವೇ ರಕ್ತದಾನ ಮಾಡುತ್ತಿದ್ದಾರೆ. ಬಹಳಷ್ಟು ದೇಶಗಳಲ್ಲಿ ರಕ್ತದಾನಿಗಳ ಕೊರತೆಯಿದೆ. ಪ್ರತಿಯೊಬ್ಬ ವರ್ಷಕ್ಕೆ ಕನಿಷ್ಠ ಎರಡು ಬಾರಿಯಾದರೂ ರಕ್ತದಾನ ಮಾಡುತ್ತಿದ್ದರೆ, ಹೃದಯಾಘಾತದ ಪ್ರಮಾಣ ಶೇ 80ರಷ್ಟು ಕಡಿಮೆ ಎಂದು ಅವರು ಹೇಳಿದರು.

ಚಲನಚಿತ್ರ ಕಲಾವಿದರಾದ ಐಶ್ವರ್ಯ ನಾಗ್ ಹಾಗೂ ಶಿವಧ್ವಜ್ ರಕ್ತದಾನ ಶಿಬಿರ ಉದ್ಘಾಟಿಸಿದರು.

ಕರ್ನಾಟಕ ಸ್ವಯಂಪ್ರೇರಿತ ರಕ್ತದಾನಿಗಳ ಸಂಘದೊಂದಿಗೆ ಜಂಟಿಯಾಗಿ ಕರ್ನಾಟಕ ಚಿತ್ರಕಲಾ ಪರಿಷತ್, ಭಾರತೀಯ ರೆಡ್‌ಕ್ರಾಸ್ ಸಂಸ್ಥೆ, ಭಾರತೀಯ ಸಾರ್ವಜನಿಕ ಸಂಪರ್ಕ ಪರಿಷತ್ ಈ ಕಾರ್ಯಕ್ರಮವನ್ನು ಆಯೋಜಿಸಿದ್ದವು.

15-6-2008

ಸಂಯುಕ್ತ ಕರ್ನಾಟಕ, ಬೆಂಗಳೂರು




ಬೆಂಗಳೂರು ಚಿತ್ರಕಲಾ ಪರಿಷತ್‌ನಲ್ಲಿ ಶನಿವಾರ ಆಯೋಜಿಸಿದ್ದ ವಿಶ್ವ ರಕ್ತದಾನ ದಿನಾಚರಣೆ ಉದ್ಘಾಟನಾ ಸಮಾರಂಭದಲ್ಲಿ ಪಬ್ಲಿಕ್ ರಿಲೇಷನ್ ಕೌನ್ಸಿಲ್ ಆಫ್ ಇಂಡಿಯಾದ ಮುಖ್ಯಸ್ಥ ಎಂ.ಬಿ. ಜಯರಾಂ, ರಕ್ತದಾನಿಗಳ ಸಂಘದ ಅಧ್ಯಕ್ಷ ರಾಜು ಚಂದ್ರಶೇಖರ್, ರೆಡ್‌ಕ್ರಾಸ್‌ನ ಮುಖ್ಯಸ್ಥ ಪ್ರೊ.ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.



ಭಾರತ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯಶಾಖೆ ಉಪಾಧ್ಯಕ್ಷ ವೂಡೇ ಪಿ.ಕೃಷ್ಣ ಇತ್ತೀಚೆಗೆ ಮುಖ್ಯಮಂತ್ರಿ ಹಾಗೂ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ಬಿ.ಎಸ್.ಯಡಿಯೂರಪ್ಪ ಅವರಿಗೆ ಹೂ ಗುಚ್ಛ ನೀಡಿ ಅಭಿನಂದಿಸಿದರು. ಗೌರವ ಖಜಾಂಚಿ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ.ಎನ್.ಜಿ.ನಾರಾಯಣ ಈ ಸಂದರ್ಭದಲ್ಲಿ ಹಾಜರಿದ್ದರು.

ಸಂಜೆವಾಣಿ

ಭಾನುವಾರ 15 ಜೂನ್ 2008



ಪ್ರಸಕ್ತ ಸಾಲಿನ ದ್ವಿತೀಯ ಪಿಯುಸಿ ಪರೀಕ್ಷೆಯಲ್ಲಿ ಕಾಮರ್ಸ್ ವಿಭಾಗದಲ್ಲಿ ಶೇ.97.5 ರಷ್ಟು ಅಂಕಗಳಿಸಿ ರಾಜ್ಯಕ್ಕೆ ಪ್ರಥಮ ಸ್ಥಾನ ಪಡೆದ ಇ.ಎಸ್. ಶ್ರೀನಿಧಿ ಹಾಗೂ ಸಿ.ಇ.ಟಿ ಇಂಜಿನಿಯರಿಂಗ್‌ನಲ್ಲಿ 8ನೇ ರ್‍ಯಾಂಕ್ ಪಡೆದ ಆರ್. ಅಕ್ಷಯ್ ಕುಮಾರ್ ಅವರನ್ನು ಇತ್ತೀಚೆಗೆ ಶೇಷಾದ್ರಿಪುರಂ ಸಂಯುಕ್ತ ಪದವಿಪೂರ್ವ ಕಾಲೇಜಿನಲ್ಲಿ ಸನ್ಮಾನಿಸಲಾಯಿತು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಪ್ರಾಂಶುಪಾಲ ಎಂ.ಆರ್. ಸಂತಾನಮ್ ಮತ್ತಿತರರಿದ್ದಾರೆ.

## ಉದಯವಾಣಿ

ಭಾನುವಾರ 15 ಜೂನ್ 2008




ವಿಶ್ವ ರಕ್ತದಾನ ದಿನದ ಅಂಗವಾಗಿ ಕರ್ನಾಟಕ ಸ್ವಯಂ ಪ್ರೇರಿತ ರಕ್ತದಾನಿಗಳ ಸಂಘ ಶನಿವಾರ ಬೆಂಗಳೂರಿನಲ್ಲಿ ಏರ್ಪಡಿಸಿದ್ದ ರಕ್ತದಾನ ಶಿಬಿರದಲ್ಲಿ ದಾನಿಗಳು ರಕ್ತ ನೀಡಿದರು. ಚಿತ್ರನಟಿ ಐಶ್ವರ್ಯ ನಾಗ್, ನಟ ಶಿವಧ್ವಜ್, ಕೆಪಿಸಿಎಲ್ ಸಾರ್ವಜನಿಕ ಸಂಪರ್ಕ ವಿಭಾಗದ ಮುಖ್ಯಸ್ಥ ಜಯರಾಂ ಹಾಗೂ ಇತರರು ಉಪಸ್ಥಿತರಿದ್ದರು.

# ರಕ್ತದಾನದ ಮಹತ್ವ ಸಾರಲು ಒಂದು ಸ್ಮರಣೀಯ ದಿನ

– ಜೂನ್ 14

GIVE BLOOD



GIVE LIFE




**Wooday P. Krishna**
Vice - Chairman
Indian Red Cross Society
Karnataka State Branch


ಮಹಿಳೆಯರು ಗರ್ಭಧರಿಸಿದ ಅಥವಾ ಹೆರಿಗೆಯ ಅವಧಿಯಲ್ಲಿ ಪ್ರತಿವಷ ಸುಮಾರು 5 ಲಕ್ಷಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಅಸುನೀಗುತ್ತಾರೆ ಎಂಬುದು ಅಧ್ಯಯನವೊಂದರಿಂದ ತಿಳಿದುಬದಿದೆ. ಈ ಪೈಕಿ ಶೇಕಡಾ 25ರಷ್ಟು ಪಾಲು ಅತಿಯಾದ ರಕ್ತಸ್ರಾವದಿಂದಾಗಿಯೇ ಆಗುತ್ತದೆ ಎಂಬುದು ಗಮನಿಸಬೇಕಾದ ಅಂಶ. ಇಂತಹ ಸಮಯದಲ್ಲಿ ಸೂಕ್ತ ಪ್ರಮಾಣದಲ್ಲಿ ಇಂತಹವರಿಗೆ ರಕ್ತದಾನ ಮಾಡಬೇಕು ಎಂದು ಯಾರಿಗಾದರೂ ಅನಿಸುತ್ತದೆಯಲ್ಲವೇ? ಹೆರಿಗೆಯ ಸಮಯದಲ್ಲಿ ಸಾಕಷ್ಟು ಪ್ರಮಾಣದಲ್ಲಿ ರಕ್ತದ ಸಂಗ್ರಹವಿದ್ದರೆ ಹೆರಿಗೆಯ ಸಮಯದಲ್ಲಿನ ಮರಣದ ಪ್ರಮಾಣವನ್ನು ಕಡಿಮೆಗೊಳಿಸಬಹುದು ಎಂದು ಅನಿಸುತ್ತದೆಯಲ್ಲವೇ? ಇದೇ ರೀತಿಯಲ್ಲಿ ಯಾರಿಗಾದರೂ ಅಪಘಾತವಾಗಿ ರಕ್ತಸ್ರಾವ ಸಂಭವಿಸಿದಾಗಲೂ ರಕ್ತದ ಅಗತ್ಯ ಮತ್ತು ರಕ್ತದಾನಿಗಳ ಅಗತ್ಯಕಂಡುಬಂದೇ ಬರುತ್ತದೆ.

ಇದನ್ನು ಗಮನದಲ್ಲಿಟ್ಟುಕೊಂಡೇ 2004ನೇ ಇಸವಿಯಿಂದಲೂ ..ನ್ 14ರ ದಿನಾಂಕವನ್ನು "ವಿಶ್ವ ರಕ್ತದಾನಿಗಳ ದಿನ"ವೆಂದು ಆಚರಿಸಲಾಗುತ್ತಿದೆ. ಎ, ಬಿ ಮತ್ತು ಒ ರಕ್ತದ ಗುಂಪುಗಳನ್ನು ಕಂಡುಹಿಡಿದ ಕಾರ್ಲ್ ಲ್ಯಾಂಡ್‌ಸ್ಟೈನರ್‌ನ ಹುಟ್ಟುಹಬ್ಬದ ಸವಿನೆನಪಿಗಾಗಿ ಈ ದಿನವನ್ನು ಆಚರಿಸಲಾಗುತ್ತಿದೆ ಎಂಬುದು ಇದಕ್ಕಿರುವ ಮತ್ತೊಂದು ಮಹತ್ವ. ಅಂತೆಯೇ, ವಿಶ್ವದಾದ್ಯಂತ ನೆಲೆಗೊಂಡಿರುವ ಮಿಲಿಯಗಟ್ಟಲೇ ಸ್ವಯಂಪ್ರೇರಿತ ರಕ್ತದಾನಿಗಳಿಗೆ ಧನ್ಯವಾದಗಳನ್ನು ಹೇಳಲೆಂದೂ ಈ ಶುಭದಿನವನ್ನು ಆಚರಿಸಲಾಗುತ್ತದೆ.

ಸ್ವಯಂಪ್ರೇರಿತ ರಕ್ತದಾನದ ಪ್ರಾಮುಖ್ಯತೆಯ ಕುರಿತು ಅರಿವು ಮೂಡಿಸಿ ಹೆಚ್ಚು ಹೆಚ್ಚು ಜನರನ್ನು ಈ ನಿಟ್ಟಿನಲ್ಲಿ ತೊಡಗಿಸುವ ಗುರಿಯನ್ನು ಈ ವಿಶ್ವ ರಕ್ತದಾನಿಗಳ ದಿನವು ಹೊಂದಿದೆ ಎಂಬುದು ವಿಶೇಷ. ರಕ್ತದ ಪ್ರಾಮುಖ್ಯತೆಯ ಅರಿವು ಮತ್ತು ರಕ್ತದಾನಕ್ಕಿರುವ ಮಹತ್ವದ ಕುರಿತು ಇಷ್ಟೆಲ್ಲಾ ಹೇಳಲಾಗುತ್ತಾ ಬಂದಿದ್ದರೂ ಸಹ ಅಗತ್ಯ ಪ್ರಮಾಣದಲ್ಲಿ ಆರೋಗ್ಯಕರ ಮತ್ತು ಸುರಕ್ಷಿತ ಗುಣಮಟ್ಟದ ರಕ್ತ ಸಂಗ್ರಹವಾಗುತ್ತಿಲ್ಲ ಎಂಬುದೂ ವಿಷಾದಕರ ಅಂಶವೇ. ಇದಕ್ಕೆ ಕಾರಣಗಳು ಹಲವಾರು. ಬಹುತೇಕ ರಾಷ್ಟ್ರಗಳಲ್ಲಿ ರೋಗಿಗಳು ರಕ್ತವನ್ನು ಪಡೆಯಲು ತಮ್ಮ ಬಂಧುಗಳನ್ನೋ ಅಥವಾ ಸ್ನೇಹಿತರನ್ನೋ ಅವಲಂಬಿಸಬೇಕಿದೆ. ಅಥವಾ, ರಕ್ತದಾನಿಗಳು ರಕ್ತದಾನಕ್ಕೆ ಪ್ರತಿಯಾಗಿ ಹಣವನ್ನು ಬಯಸುತ್ತಾರೆ. ಈ ರಕ್ತವು ಸುರಕ್ಷಿತ ಮತ್ತು ಆರೋಗ್ಯಕರವಾಗಿಲ್ಲದಿರುವುದೇ ಅನೇಕ ಸಮಸ್ಯೆಗಳಿಗೆ ಕಾರಣವಾಗಿದೆ. ಆದರೆ ಸ್ವಯಂಪ್ರೇರಿತರಾಗಿ ದಾನ ಮಾಡಿದವರಿಂದ ಸಂಗ್ರಹಿಸಲಾದ ರಕ್ತವು ಉತ್ತಮ ಗುಣಮಟ್ಟದ್ದಾಗಿರುತ್ತದೆ ಎಂದು ತಿಳಿದುಬಂದಿದೆ. ಅವರಲ್ಲಿ ಎಚ್‌ಐವಿ, ಹೆಪಟೈಟಿಸ್ ಮತ್ತು ಜೀವಕ್ಕೆ ಅಪಾಯವನ್ನೊಡ್ಡುವ ಇತರ ಸೋಂಕುಗಳು ಇರದಿರುವುದೇ ಇದಕ್ಕೆ ಕಾರಣ. ಪ್ರತಿಫಲಾಪೇಕ್ಷೆ ಇರದ ಇಂತಹ "ಹೀರೋ"ಗಳಿಗಾಗಿಯೇ ಜೂನ್ 14ರ ಈ ದಿನವನ್ನು ಆಚರಿಸಲಾಗುತ್ತದೆ ಎಂಬುದು ನೆನೆಯಬೇಕಾದ ಅಂಶ.

**ರಕ್ತದಾನಕ್ಕೆ ಸಂಬಂಧಿಸಿದಂತೆ ನಮ್ಮ ಜನರಲ್ಲಿ ಕೆಲವೊಂದು ತಪ್ಪು ಕಲ್ಪನೆಗಳು ಮನೆ ಮಾಡಿವೆ. ಅವುಗಳೆಂದರೆ:**

- ರಕ್ತದಾನದಿಂದ ಅಶಕ್ತತೆ ಅಥವಾ ತಲೆಸುತ್ತು ಬರುತ್ತದೆ.
- ರಕ್ತದಾನದಿಂದಾಗಿ ದೇಹದ ತೂಕ ನಷ್ಟವಾಗುತ್ತದೆ.
- ಇದರಿಂದಾಗಿ ದೇಹದ ಸಮತೋಲನವೇ ತಪ್ಪಿದಂತಾಗುತ್ತದೆ.
- ರಕ್ತವನ್ನು ಸ್ವೀಕರಿಸಿದವರು ದಾನಿಗಳ ಗುಣಲಕ್ಷಣಗಳನ್ನೇ ಬೆಳೆಸಿಕೊಂಡು ಬಿಡುತ್ತಾರೆ.
- ಬಾಹ್ಯ ಜೀನ್‌ಗಳು ದೇಹವನ್ನು ಪ್ರವೇಶಿಸಿಬಿಡುತ್ತವೆ.
- ಪತ್ನಿಗೆ ರಕ್ತದಾನವನ್ನು ಮಾಡಿದ ಪತಿ ಅವಳಿಗಿಂತ ಮುಂಚೆಯೇ ಮರಣ ಹೊಂದುತ್ತಾನೆ ಅಥವಾ ರಕ್ತದಾನ ಮಾಡಿದಾತನಿಗೆ ಮಕ್ಕಳಾಗುವುದಿಲ್ಲ.
- ರಕ್ತದಾನ ಮಾಡುವುದರಿಂದ ಪಡೆದುಕೊಂಡಾತನ ಸಂಬಂಧಿಯೇ ಆದಂತಾಗುತ್ತದೆ....

ಹೀಗೆ ರಕ್ತದಾನದ ಕುರಿತು ಏನೆಲ್ಲಾ ತಪ್ಪು ಕಲ್ಪನೆಗಳಿವೆ. ಆದರೆ ಇವೆಲ್ಲಾ ಕೇವಲ ಕಲ್ಪನೆಗಳಷ್ಟೇ ಎಂದೇ ಈ ಸಂದರ್ಭದಲ್ಲಿ ಹೇಳಬಹುದು.

## ರಕ್ತದಾನ ಮಾಡಲೂ ಅರ್ಹತೆಗಳಿವೆಯೇ?

ಹೌದು, ಖಂಡಿತಾ ಇದೆ. ನೀವು ರಕ್ತದಾನ ಮಾಡಲು ಮುಂದಾಗುವುದಕ್ಕೆ ಮೊದಲು ಈ ಅರ್ಹತಾ ಮಾನದಂಡಗಳನ್ನು ಒಮ್ಮೆ ಗಮನಿಸುವುದು ಒಳಿತು. ನೀವು 18ರಿಂದ 60 ವರ್ಷ ವಯಸ್ಸಿನೊಳಗೆ ಇರುವವರಾಗಿದ್ದು, ದೇಹದ ತೂಕ ಕನಿಷ್ಠಪಕ್ಷ 45 ಕೆ.ಜಿ. ಇರಬೇಕು. ದಾನ ಮಾಡುವುದಕ್ಕೆ ಮುಂಚಿನ ಒಂದು ವರ್ಷದ ಅವಧಿಯಲ್ಲಿ ಯಾವುದೇ ದೊಡ್ಡ ಕಾಯಿಲೆಯಿಂದ ನರಳಿರಬಾರದು. ಹಿಂದಿನ ಮೂರು ತಿಂಗಳಲ್ಲಿ ರಕ್ತದಾನ ಮಾಡಿರಬಾರದು. ನಿಮ್ಮ ರಕ್ತದಲ್ಲಿನ ಹಿಮೋಗ್ಲೋಬಿನ್ ಮಟ್ಟವು ಶೇಕಡ 12.5 ಮತ್ತು ಅದಕ್ಕಿಂತ ಹೆಚ್ಚಿರಬೇಕು. ರಕ್ತದಾನ ಮಾಡುವ ಸಮಯದಲ್ಲಿ ನಿಮ್ಮ ದೇಹದ ಆರೋಗ್ಯ ಸದೃಢವಾಗಿರಬೇಕು.

ನೀವು ಯಾರಿಗೆ ರಕ್ತದಾನ ಮಾಡುತ್ತೀರೋ ಅವರಿಗೆ ಯಾವುದೇ ರೀತಿಯ ತೊಂದರೆಯಾಗಬಾರದಾದ್ದರಿಂದ, ನೀವು ಅನಾರೋಗ್ಯದಿಂದ ಬಳಲುತ್ತಿದ್ದರೆ, ರಕ್ತಹೀನತೆಯ ಸಮಸ್ಯೆಯಿದ್ದರೆ, ನೀವು ಗರ್ಭಿಣಿಯಾಗಿದ್ದರೆ ಅಥವಾ ಹಾಲೂಡಿಸುವ ತಾಯಾಗಿದ್ದರೆ ರಕ್ತದಾನ ಮಾಡಲು ಮುಂದಾಗಬಾರದು. ಇಷ್ಟೇ ಅಲ್ಲದೇ, ಹೃದಯ ಸಂಬಂಧಿ ರೋಗಗಳು, ಅಧಿಕ ರಕ್ತದೊತ್ತಡ, ಮಧುಮೇಹ, ಎಪಿಲೆಪ್ಸಿ, 'ಐವಿ ಅಥವಾ ಸಿಫಿಲಿಸ್‌ನಂತಹ ಕಾಯಿಲೆಯಿಂದ ಬಳಲುತ್ತಿದ್ದರೂ ಸಹ ನೀವು ರಕ್ತದಾನ ಮಾಡಬಾರದು.

ಇಡೀ ವಿಶ್ವದಲ್ಲಿ, ಅಷ್ಟೇ ಏಕೆ, ಭಾರತದಲ್ಲಿ ಹಾಗೂ ನಮ್ಮ ಕರ್ನಾಟಕ ರಾಜ್ಯದಲ್ಲಿ ರಕ್ತದ ಬೇಡಿಕೆ ಮತ್ತು ಪೂರೈಕೆಯ ಪ್ರಮಾಣದಲ್ಲಿ ಗಣನೀಯ ಅಂತರವಿದೆ. ವಿಶ್ವದಲ್ಲಿ ಸದ್ಯಕ್ಕೆ 150 ಮಿಲಿಯನ್ ದಾನಿಗಳ ಅಗತ್ಯವಿದ್ದು ಆಗುತ್ತಿರುವ ಪೂರೈಕೆ 88 ಮಿಲಿಯನ್ ಯುನಿಟ್‌ಗಳಷ್ಟು; ಭಾರತದಲ್ಲಿರುವ ದಾನಿಗಳ ಬೇಡಿಕೆ 8 ಮಿಲಿಯನ್‌ನಷ್ಟಿದ್ದರೆ ಆಗುತ್ತಿರುವ ಪೂರೈಕೆ 5.1 ಮಿಲಿಯನ್ ಯುನಿಟ್‌ಗಳಷ್ಟು. ಅದೇ ರೀತಿಯಲ್ಲಿ, ಕನಾಟಕದ ಪರಿಸ್ಥಿತಿಯೇನೂ ಭಿನ್ನವಾಗಿಲ್ಲ. ನಮ್ಮ ರಾಜ್ಯದಲ್ಲಿ ಒಟ್ಟು 5.5 ಲಕ್ಷ ದಾನಿಗಳ ಬೇಡಿಕೆಯಿದ್ದರೆ, ಆಗುತ್ತಿರುವ ಪೂರೈಕೆ 3.63ಲಕ್ಷ ಯುನಿಟ್‌ಗಳಷ್ಟಿದೆ.

ಈ ಹಿನ್ನೆಲೆಯಲ್ಲಿ, ನಿಯಮಿತ ಅಂತರಗಳಲ್ಲಿ ರಕ್ತದಾನವನ್ನು ಮಾಡುವಂತೆ ಈಗಿರುವ ಮತ್ತು ಹೊಸ ದಾನಿಗಳನ್ನು ಪ್ರೋತ್ಸಾಹಿಸಲು ರಾಷ್ಟ್ರೀಯ ರಕ್ತದಾನ ನೀತಿಯೊಂದನ್ನು ರೂಪಿಸಲಾಗಿದೆ. ಅಗತ್ಯಾನುಸಾರ ಸುರಕ್ಷಿತ ರಕ್ತವನ್ನು, ರಕ್ತದ ಘಟಕಗಳನ್ನು ಮತ್ತು ಅದರ ಉತ್ಪನ್ನಗಳನ್ನು ಸಾಕಷ್ಟು ಪ್ರಮಾಣದಲ್ಲಿ ದೊರಕಿಸಿಕೊಡುವಂತಾಗಲು ಈ ನೀತಿಯು ಶ್ರಮವಹಿಸುತ್ತಿದೆ. ಕೇವಲ ನೀತಿಯನ್ನು ರೂಪಿಸುವುದರಿಂದ ಗುರಿಯನ್ನು ಮುಟ್ಟುವುದು ಸಾಧ್ಯವಿಲ್ಲ. ಎರಡೂ ಕೈಸೇರಿದರೆ ಚಪ್ಪಾಳೆ ಎನ್ನುವಂತೆ, ರದ ನೀತಿ ಸೂತ್ರಗಳಿಗೆ ಜನರ ಬೆಂಬಲ ಸಿಕ್ಕಾಗಲೇ ಯಶಸ್ಸು ಸಾಧ್ಯ. ನೀವು ನೀಡುವ ಕೇವಲ ಒಂದು ಲೀಟರ್ ರಕ್ತದಿಂದ ಮೂರು ಜನರ ಜೀವವನ್ನು ಉಳಿಸಲು ಸಾಧ್ಯ ಎಂದಿರಬೇಕಾದರೆ, ನೀವೇಕೆ ರಕ್ತದಾನಕ್ಕೆ ಮುಂದಾಗಬಾರದು?

ಆ ಹೃದಯವಂತಿಕೆ, ಆರೋಗ್ಯಕರ ಮನೋಭಾವ ಖಂಡಿತಾ ನಿಮ್ಮಲ್ಲಿದೆ. ಅಲ್ಲವೇ?

## ರಕ್ತದ ಕುರಿತು ಒಂದಿಷ್ಟು ಮಾಹಿತಿಗಳು




ಮಾನವ ದೇಹದಲ್ಲಿರುವ ರಕ್ತವು ಒಂದು ಸಂಪದ್ಭರಿತ ಉತ್ಪನ್ನವೆಂದು ಹೇಳಬಹುದು. ಕೆಂಪು ರಕ್ತಕಣಗಳು, ಪ್ಲಾಟೆಲೆಟ್‌ಗಳು ಮತ್ತು ಪ್ಲಾಸ್ಮಾವನ್ನು ಮುಖ್ಯವಾಗಿ ರಕ್ತವು ಹೊಂದಿದ್ದು, ಇದರಲ್ಲಿ ಪ್ಲಾಸ್ಮಾವೊಂದರಲ್ಲೇ ಅನೇಕ ಪ್ರೋಟೀನ್‌ಗಳಿರುತ್ತವೆ. ಈ ಎಲ್ಲಾ ಘಟಕಗಳೂ ತಮ್ಮದೇ ಆದ ಗುಣಲಕ್ಷಣ ಮತ್ತು ಉಪಯೋಗವನ್ನು ಹೊಂದಿವೆ. ರೋಗಿಯ ಅಗತ್ಯಕ್ಕನುಸಾರವಾಗಿ ಇವು ಬಳಸಲ್ಪಡುತ್ತವೆ. ಉದಾಹರಣೆಗೆ, ರಕ್ತಹೀನತೆಯಿಂದ ಬಳಲುತ್ತಿರುವ ರೋಗಿಗೆ ಕೇವಲ ಕೆಂಪು ರಕ್ತ ಕಣಗಳಷ್ಟೇ ಬೇಕಾಗುತ್ತವೆ. ಅದೇ ರೀತಿಯಲ್ಲಿ, ಹಿಮೋಫೀಲಿಯಾದಿಂದ ಬಳಲುತ್ತಿರುವ ರೋಗಿಗೆ ಕೇವಲ ಪ್ಲಾಸ್ಮಾದಲ್ಲಿರುವ ರಕ್ತ ಹೆಪ್ಪುಗಟ್ಟಿಸುವ ಅಂಶಗಳಷ್ಟೇ ಸಾಕು. ಒಮ್ಮೆ ದಾನ ಮಾಡಿದರೆ ಕೆಂಪು ರಕ್ತ ಕಣಗಳು ಕೇವಲ 35 ದಿನಗಳವರೆಗೆ ಮತ್ತು ಪ್ಲಾಟೆಲೆಟ್‌ಗಳು ಕೇವಲ 5 ದಿನಗಳವರೆಗೆ ಮಾತ್ರ ಇರುತ್ತವೆ. ಆದ್ದರಿಂದ ನಿರಂತರವಾಗಿ ತಾಜಾ ರಕ್ತವನ್ನು ಒದಗಿಸುವುದು ಅತ್ಯಂತ ಪ್ರಮುಖವಾದ ಅಂಶವೆನ್ನಬಹುದು.

ಬೆಂಗಳೂರು ವಿಜಯ | ಶನಿವಾರ, 14 ಜೂನ್ 2008

## ಏನು?

**ಸ್ವಯಂ ಪ್ರೇರಿತ ರಕ್ತದಾನಿಗಳ ಸಂಘ:** ವಿಶ್ವ ರಕ್ತದಾನಿಗಳ ದಿನಾಚರಣೆ. ಉದ್ಘಾಟನೆ: ಸಚಿವ ಎಸ್. ಸುರೇಶ್ ಕುಮಾರ್, ಅತಿಥಿಗಳು: ನಟರಾದ ಶಿವಧ್ವಜ್ ಮತ್ತು ಐಶ್ವರ್ಯ ನಾಗ್, ಸಂಘದ ಅಧ್ಯಕ್ಷ ರಾಜು ಚಂದ್ರಶೇಖರ್, ಚಿತ್ರಕಲಾ ಪರಿಷತ್ ಅಧ್ಯಕ್ಷ ಟಿ. ಪ್ರಭಾಕರ್, ಅಧ್ಯಕ್ಷತೆ: ಭಾರತೀಯ ರೆಡ್ ಕ್ರಾಸ್ ಸೊಸೈಟಿ ಉಪಾಧ್ಯಕ್ಷ ಪಿ. ಕೃಷ್ಣ, ಸ್ಥಳ: ಚಿತ್ರಕಲಾ ಪರಿಷತ್, ಕುಮಾರ ಕೃಪ ರಸ್ತೆ. ಬೆಳಗ್ಗೆ 10.

ಬೆಂಗಳೂರು ವಿಜಯ | ಶುಕ್ರವಾರ, 13 ಜೂನ್ 2008

# ಮರೆಯಾಗುತ್ತಿರುವ ಮಾನವೀಯ ಸಂಬಂಧ

**ಬೆಂಗಳೂರು:** ಇಂದಿನ ದಿನಗಳಲ್ಲಿ ಮಾನವೀಯ ಸಂಬಂಧಗಳು ಮರೆಯಾಗುತ್ತಿವೆ ಎಂದು ಸಾಹಿತಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ವಿಷಾದ ವ್ಯಕ್ತಪಡಿಸಿದರು.

ಸ್ನೇಹಸೇತು ಸಾಮಾಜಿಕ ಸಾಂಸ್ಕೃತಿಕ ಸಂಸ್ಥೆಯ 11ನೇ ವಾರ್ಷಿಕೋತ್ಸವ ಹಾಗೂ ವಿಶ್ವ ಪರಿಸರ ದಿನಾಚರಣೆ ಅಂಗವಾಗಿ ಏರ್ಪಡಿಸಿದ್ದ 'ಸಾಹಿತ್ಯ ಸೇತು' ಪ್ರಶಸ್ತಿ ಪ್ರದಾನ ಸಮಾರಂಭ ಉದ್ಘಾಟಿಸಿ ಮಾತನಾಡಿದರು.

ಪ್ರತಿಯೊಂದು ವಿಷಯಗಳು ವ್ಯಾಪಾರ ಮನೋಭೂಮಿಕೆಯಾಗಿಪರಿವರ್ತನೆಯಾಗಿ ಸಂಬಂಧಗಳು ಕಾಣೆಯಾಗುತ್ತಿ ರುವ ಸಂದರ್ಭದಲ್ಲಿ ಸ್ನೇಹ, ಪ್ರೀತಿ, ವಿಶ್ವಾಸ, ಮಮತೆಗಳು ಮರೆಯಾಗಿ ಹಣ ಮತ್ತು ಅಧಿಕಾರ ಕೇಂದ್ರವಾಗುತ್ತಿರುವಾಗ ವಿಶ್ವದ ಎಲ್ಲರನ್ನೂ ಗೆಳೆತನದಿಂದ ಗೆಲ್ಲುವ ಮಂತ್ರವನ್ನು ಮನನ ಮಾಡಿಕೊಳ್ಳಬೇಕು ಎಂದು ಹೇಳಿದರು.

'ಸಾಹಿತ್ಯ ಸೇತು' ಪ್ರಶಸ್ತಿ ಪ್ರದಾನ ಮಾಡಿ ಮಾತನಾಡಿದ ಸಾಹಿತಿ ಡಾ. ಎಲ್. ಹನುಮಂತಯ್ಯ, ಮನುಷ್ಯ ಸಂಬಂಧಗಳು ಜಾಗತಿಕ ವ್ಯಾಪಾರೀಕರಣದಿಂದಾಗಿ ನಶಿಸುತ್ತಿದ್ದು, ಮೌಲ್ಯಗಳು ದಿಕ್ಕಾಪಾಲಾಗಿ ಹೋಗಿವೆ. ನಂಬಿಕೆ, ವಿಶ್ವಾಸಗಳು ಸವಕಲು ನಾಣ್ಯಗಳಾಗಿವೆ ಎಂದ ಅವರು, ಅಂತಃಕರಣದ ವಾತ್ಸಲ್ಯವನ್ನು ಮೈಗೂಡಿಸಬೇಕೆಂದು ಕರೆ ನೀಡಿದರು.



**ಸ್ನೇಹಸೇತು ಸಾಮಾಜಿಕ ಸಾಂಸ್ಕೃತಿಕ ಸಂಸ್ಥೆ ಏರ್ಪಡಿಸಿದ್ದ 'ಸಾಹಿತ್ಯ ಸೇತು' ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಕೊಪ್ಪರಂ ಅನ್ನಪೂರ್ಣ, ಸವಿರಾಜು, ಪರಶು ಅವರನ್ನು ಸನ್ಮಾನಿಸಲಾಯಿತು. ಸಂಧ್ಯಾರೆಡ್ಡಿ, ವೂಡೆ ಪಿ. ಕೃಷ್ಣ, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ಡಾ. ಎಲ್. ಹನುಮಂತಯ್ಯ ಹಾಜರಿದ್ದರು.**

ಸಮಾಜ ಸೇವಕ ವೂಡೆ ಪಿ. ಕೃಷ್ಣ ಅತಿಥಿಗಳಾಗಿ ಭಾಗವಹಿಸಿದ್ದರು. ಸಾಹಿತಿ ಡಾ. ಕೆ.ಆರ್. ಸಂಧ್ಯಾರೆಡ್ಡಿ ಅಧ್ಯಕ್ಷತೆ ವಹಿಸಿದ್ದರು.

ಇದೇ ಸಂದರ್ಭದಲ್ಲಿ ಹಲವಾರು ಸಾಹಿತಿಗಳಿಗೆ 'ಸಾಹಿತ್ಯ ಸೇತು' ಪ್ರಶಸ್ತಿ ನೀಡಿ ಗೌರವಿಸಲಾಯಿತು. ಸ್ನೇಹ ಸೇತು ಸಂಸ್ಥೆಯ ಅಧ್ಯಕ್ಷ ವೀರೇಶ್ ಬಳ್ಳಾರಿ ಸ್ವಾಗತಿಸಿದರು. ಕವಯತ್ರಿ ಕೆ.ಎಂ. ನಾಗಲಕ್ಷ್ಮಿ ಕಾರ್ಯಕ್ರಮ ನಿರೂಪಿಸಿದರು..

**ಭೂಸೇನಾ ಕಾರ್ಯಾಗಾರಕ್ಕೆ ಆಯ್ಕೆ**

ಭೂಸೇನಾ ಕಾರ್ಯಾಗಾರ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಘದ ಅಧ್ಯಕ್ಷರಾಗಿ ಟಿ. ಲಲಿತಾ ನಾಯಕ್, ಕಾರ್ಯಾಧ್ಯಕ್ಷರಾಗಿ ಕೆ. ಸುದರ್ಶನ ಶೆಟ್ಟಿ, ಪ್ರಧಾನ ಕಾರ್ಯದರ್ಶಿಯಾಗಿ ಎಸ್. ನಾಗೇಂದ್ರ, ಜಂಟಿ ಕಾರ್ಯದರ್ಶಿಗಳಾಗಿ ಕೆ. ಉಮೇಶ್, ಮಹೇಶಾಚಾರಿ, ಸಂಘಟನಾ ಕಾರ್ಯದರ್ಶಿಯಾಗಿ ಬಿ. ಸುರೇಶ್ ಹಾಗೂ ಕೋಶಾಧ್ಯಕ್ಷರಾಗಿ ಕುಮಾರಸ್ವಾಮಿ ಆಯ್ಕೆಯಾಗಿದ್ದಾರೆ.

ಕಾರ್ಯಕಾರಿ ಸಮಿತಿ ಸದಸ್ಯರಾಗಿ ಎಸ್. ಶ್ರೀಹರಿ, ಎನ್. ಮಂಜುನಾಥ, ವಿಜಯ್ ಎಸ್. ಹಕ್ಕಾರೆ, ಅನಿಲ್‌ಕುಮಾರ್ ಜಿ. ದೇವೂರ್, ಟಿ. ಪಿಳ್ಳವೆಂಕಟಪ್ಪ, ಎಸ್. ಶಿವರಾಜ್, ಬಿ. ಶ್ರೀಧರ್, ಆದಿತ್ಯ ಆಯ್ಕೆಯಾಗಿದ್ದಾರೆ.

ಸಂಜೆವಾಣಿ

ಬುಧವಾರ 11 ಜೂನ್ 2008 ಬೆಂಗಳೂರು



ರಾಜ್ಯದ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಉಪಾಧ್ಯಕ್ಷ ಪ್ರೊ. ಪಿ. ಕೃಷ್ಣ ಅವರು ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರನ್ನು ಅಭಿನಂದಿಸಿದರು. ಈ ಸಂದರ್ಭದಲ್ಲಿ ಸಂಸ್ಥೆಯ ಗೌರವ ಖಜಾಂಚಿ ರಾಜು ಚಂದ್ರಶೇಖರ್ ಹಾಗೂ ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ ಅವರಿದ್ದಾರೆ.

# ವ್ಯಾಪಾರ ಮನಸ್ಸಿನಿಂದ ಸಂಬಂಧಕ್ಕೆ ಧಕ್ಕೆ



ವಿಶ್ವ ಪರಿಸರ ದಿನದ ಪ್ರಯುಕ್ತ ನಡೆದ 'ಸಾಹಿತ್ಯ ಸೇತು' ಪ್ರಶಸ್ತಿ ಪ್ರದಾನ ಸಮಾರಂಭವನ್ನು ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಉದ್ಘಾಟಿಸಿದರು. ಜನಪದ ಗಾಯಕ ವೀರೇಶ್ ಬಳ್ಳಾರಿ, ಡಾ.ಎಲ್.ಹನುಮಂತಯ್ಯ, ಡಾ.ಕೆ.ಆರ್. ಸಂಧ್ಯಾರೆಡ್ಡಿ, ವೂಡೇ ಪಿ.ಕೃಷ್ಣ, ಕೆ.ಎಂ.ನಾಗಲಕ್ಷ್ಮೀ ವೀರೇಶ್ ಉಪಸ್ಥಿತರಿದ್ದರು.

ಬೆಂಗಳೂರು, ಜೂ.10–ಇಂದಿನ ದಿನಗಳಲ್ಲಿ ಮಾನವೀಯ ಸಂಬಂಧಗಳು ಮರೆಯಾಗುತ್ತಿದ್ದು, ಪ್ರತಿಯೊಂದು ವಿಷಯಗಳು ವ್ಯಾಪಾರ ಮನೋಭೂಮಿಕೆಯಾಗಿ ಪರಿವರ್ತನೆಯಾಗಿ ಸಂಬಂಧಗಳು ಕಾಣೆಯಾಗುತ್ತಿವೆ ಎಂದು ಖ್ಯಾತ ಸಾಹಿತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ವಿಷಾದಿಸಿದ್ದಾರೆ.

ಸ್ನೇಹ, ಪ್ರೀತಿ ಮರೆಯಾಗಿ ಹಣ ಮತ್ತು ಅಧಿಕಾರ ಕೇಂದ್ರವಾಗುತ್ತಿರುವಾಗ ವಿಶ್ವದ ಎಲ್ಲರನ್ನು ಗೆಳೆತನದಿಂದ ಗೆಲ್ಲುವ ಮಂತ್ರವನ್ನು ಮನನ ಮಾಡಿಕೊಳ್ಳಬೇಕೆಂದು ಹೇಳಿದರು.

ಸ್ನೇಹಸೇತು ಸಾಮಾಜಿಕ ಸಾಂಸ್ಕೃತಿಕ ಸಂಸ್ಥೆಯ 11ನೆ ವಾರ್ಷಿಕೋತ್ಸವ ಹಾಗೂ ವಿಶ್ವ ಪರಿಸರ ದಿನಾಚರಣೆಯ ಅಂಗವಾಗಿ ಏರ್ಪಡಿಸಲಾಗಿದ್ದ ಸಾಹಿತ್ಯ ಸೇತು ಪ್ರಶಸ್ತಿ ಪ್ರದಾನ ಸಮಾರಂಭದ ಉದ್ಘಾಟನೆ ನೆರವೇರಿಸಿ ಮಾತನಾಡಿ, ವಿಶ್ವದ ಎಲ್ಲಾ ಆಗು–ಹೋಗುಗಳಿಗೆ ಸ್ಪಂದಿಸುವ ಗುಣವನ್ನು ಸಾಹಿತಿಗಳು ಬೆಳಸಿಕೊಳ್ಳಲು ಸಲಹೆ ನೀಡಿದರು.

ಸಾಹಿತ್ಯ ಸೇತು ಪ್ರಶಸ್ತಿಯನ್ನು ಪ್ರದಾನ ಮಾಡಿ ಮಾತನಾಡಿದ ಸಾಹಿತಿ ಡಾ.ಎಲ್.ಹನುಮಂತಯ್ಯ, ಮನುಷ್ಯನ ಸಂಬಂಧಗಳು ಜಾಗತಿಕ ವ್ಯಾಪಾರೀಕರಣ ದಿಂದಾಗಿ ನಶಿಸುತ್ತಿದ್ದು ಮೌಲ್ಯಗಳು ದಿಕ್ಕಾಪಾಲಾಗಿ ಹೋಗಿದ್ದು, ನಂಬಿಕೆ, ವಿಶ್ವಾಸಗಳು ಸವಕಲು ನಾಣ್ಯಗಳಾಗಿದ್ದು, ಅಂತಃಕರಣದ ವಾತ್ಸಲ್ಯವನ್ನು ಮೈಗೂಡಿಸಿಕೊಳ್ಳಬೇಕೆಂದು ಕರೆ ನೀಡಿದರು.

ಸಮಾಜ ಸೇವಕ ವೂಡೇ.ಪಿ.ಕೃಷ್ಣ ಉಪಸ್ಥಿತರಿದ್ದರು. ಅಧ್ಯಕ್ಷತೆಯನ್ನು ಸಾಹಿತಿ ಡಾ.ಕೆ.ಆರ್.ಸಂಧ್ಯಾರೆಡ್ಡಿ ವಹಿಸಿದ್ದರು. ಸ್ವಾಗತ ಹಾಗೂ ಪ್ರಾಸ್ತಾವಿಕ ಮಾತುಗಳನ್ನು ಸ್ನೇಹ ಸೇತು ಸಂಸ್ಥೆಯ ಅಧ್ಯಕ್ಷ ಹಾಗೂ ಜನಪದ ಗಾಯಕ ವೀರೇಶ್ ಬಳ್ಳಾರಿ ಮಾಡಿದರೆ, ನಿರೂಪಣೆಯನ್ನು ಕವಯತ್ರಿ ಕೆ.ಎಂ.ನಾಗಲಕ್ಷ್ಮೀ ನೆರವೇರಿಸಿದರು.

ಇದೇ ಸಂದರ್ಭದಲ್ಲಿ ಸಾಹಿತಿಗಳಾದ ಕೈವಾರ ಗೋಪಿನಾಥ್, ಅನಸೂಯದೇವಿ, ಡಾ.ಸುಜಾತಾ ಅಕ್ಕಿ, ಸಂಗಮೇಶ ಬಾದವಾಡಗಿ, ಡಾ.ಪಿ.ಕೆ.ರಾಜಶೇಖರ್, ಗುರುರಾಜ ಬೆಣಕಲ್, ಶೈಲಜಾ ಸುರೇಶ್, ಅನ್ನಪೂರ್ಣ ಬಸವರಾಜ್, ಎನ್.ಲಕ್ಷ್ಮೀಪ್ರಿಯಾ, ರೇಣುಕಾ, ರತ್ನ ನಾಗರಾಜ್, ಬಂಡಪರಶು, ಸವಿರಾಜು, ಕೊಪ್ಪರಂ ಅನ್ನಪೂರ್ಣ ಅವರಿಗೆ ಸಾಹಿತ್ಯ ಸೇತು ಪ್ರಶಸ್ತಿ ನೀಡಿ ಗೌರವಿಸಲಾಯಿತು.

ವಿಜಯ ಕರ್ನಾಟಕ

ಮಂಗಳವಾರ 10 ಜೂನ್ 2008



ಭಾರತೀಯ ರೆಡ್ ಕ್ರಾಸ್ ಸಂಸ್ಥೆ ವತಿಯಿಂದ ನೂತನ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರನ್ನು ಅಭಿನಂದಿಸಲಾಯಿತು. ರೆಡ್ ಕ್ರಾಸ್ ಸಂಸ್ಥೆ ರಾಜ್ಯ ಶಾಖೆ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಹಾಗೂ ಗೌರವ ಖಜಾಂಚಿ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

10-6-2008



ಬೆಂಗಳೂರಿನಲ್ಲಿ ಸೋಮವಾರ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರನ್ನು ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಖಜಾಂಚಿ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ ಮೊದಲಾದವರು ಭೇಟಿ ಮಾಡಿ ಅಭಿನಂದಿಸಿದರು.

# ಅವಿಭಕ್ತ ಸಮಾಜ ಸ್ಥಾಪನೆಗೆ ಸಲಹೆ

ಬೆಂಗಳೂರು, ಜೂ. 6: ಇಪ್ಪತ್ತೊಂದನೇ ಶತಮಾನದಲ್ಲಿ ನಮ್ಮ ಸಮಾಜವನ್ನು ಅವಿಭಕ್ತ ಸಮಾಜವನ್ನಾಗಿಸುವ ಅಗತ್ಯವಿದೆ ಎಂದು ಕನ್ನಡ ವಿಶ್ವವಿದ್ಯಾನಿಲಯದ ಪ್ರಸಾರಂಗದ ನಿರ್ದೇಶಕ ಪ್ರೊ। ಮಲ್ಲೇಪುರಂ ಜಿ.ವೆಂಕಟೇಶ್ ಇಂದು ಇಲ್ಲಿ ಹೇಳಿದರು.

ಸ್ನೇಹಸೇತು ಸಂಸ್ಥೆ ನಗರದಲ್ಲಿ ಏರ್ಪಡಿಸಿದ್ದ 2007ನೇ ಸಾಲಿನ ಸಾಹಿತ್ಯ ಸೇತು ಪ್ರಶಸ್ತಿ ಪ್ರದಾನ ಸಮಾರಂಭಕ್ಕೆ ಚಾಲನೆ ನೀಡಿ ಮಾತನಾಡುತ್ತಿದ್ದ ಅವರು, ಎಲ್ಲ ವಿಚಾರದಲ್ಲಿಯೂ ಅವಿಭಕ್ತರಾಗಿದ್ದ ನಾವು, ನಮ್ಮ ಸಮಾಜ ವಿಭಕ್ತವಾಗುತ್ತಾ ಸಾಗಿದೆ ಎಂದರು.

ಎಲ್ಲ ಜನರನ್ನು, ಎಲ್ಲ ವಲಯವನ್ನು ಕೂಡಿಸಿಕೊಂಡು ಜೊತೆ ಜೊತೆಯಲ್ಲಿ ಸಾಗುವ ಕೆಲಸ ತುರ್ತಾಗಿ ಆಗಬೇಕಾಗಿದೆ. ಎಲ್ಲ ಮನಸ್ಸು, ವಲಯವನ್ನು ಕೂಡಿಸುವ, ಬೆಸೆಯುವ ಕೆಲಸವನ್ನು ಸಾಹಿತ್ಯ, ಸಂಗೀತ, ಕಲೆ, ಜಾನಪದ ಮಾಡುತ್ತಿದೆ ಎಂದರು.

ಎಲ್ಲ ಮನಸ್ಸುಗಳನ್ನು ಬೆಸೆಯುವ, ಸಮಾಜವನ್ನು ವಿಭಕ್ತತೆಯಿಂದ ಅವಿಭಕ್ತತೆಯತ್ತ ತೆಗೆದುಕೊಂಡು ಹೋಗಲು ಸ್ನೇಹ ಸೇತುವಿನಂತಹ ಸಂಘಟನೆಗಳ ಅಗತ್ಯವಿದೆ ಎಂದು ಹೇಳಿದರು.

ಪ್ರಶಸ್ತಿಗಳನ್ನು ಪ್ರದಾನ ಮಾಡಿ ಮಾತನಾಡಿದ ಸಾಹಿತಿ ಡಾ। ಎಲ್.ಹನುಮಂತಯ್ಯ, ಮನುಷ್ಯ ಮಾನವೀಯ ಗುಣಗಳನ್ನು ಮೈಗೂಡಿಸಿಕೊಂಡು ಬದುಕಬೇಕಾಗಿದೆ ಎಂದರು. ಮನುಷ್ಯನೊಳಗಿನ ಭಾವಕೋಶ ಒಣಗಿದರೆ ಬದುಕು ಬರಡಾಗಿ ಹೋಗುತ್ತದೆ ಎಂದು ಎಚ್ಚರಿಸಿದ ಅವರು, ಎಲ್ಲರೊಂದಿಗೆ ಸ್ನೇಹ, ಪರಸ್ಪರ ಸಹಕಾರ ನೀಡುವ ಮನಸ್ಸು ಹೊಂದಬೇಕು. ಇಲ್ಲದೆ ಹೋದರೇ ಮನುಷ್ಯ ಸಮಾಜವೇ ಅನಾಗರಿಕ ಸಮಾಜವಾಗುತ್ತದೆ ಎಂದು ಹೇಳಿದ್ದರು.

ಸಾಹಿತಿಗಳಾದ ಡಾ। ಕೆ.ಆರ್. ಸಂಧ್ಯಾರೆಡ್ಡಿ, ಸಮಾಜ ಸೇವಕ ವೂಡೆ ಪಿ.ಕೃಷ್ಣ, ಸ್ನೇಹ ಸೇತು ಸಂಘಟನೆ ಅಧ್ಯಕ್ಷ ವೀರೇಶ್ ಬಳ್ಳಾರಿ ಸೇರಿದಂತೆ ಇತರೆ ಗಣ್ಯರು ಉಪಸ್ಥಿತರಿದ್ದರು.



ಸ್ನೇಹ ಸೇತು ಸಮಾಜಿಕ ಮತ್ತು ಸಾಂಸ್ಕೃತಿಕ ಸಂಸ್ಥೆ ಬೆಂಗಳೂರಿನಲ್ಲಿ ಶುಕ್ರವಾರ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಡಾ। ಪಿ.ಕೆ. ರಾಜಶೇಖರ್, ಗುರುರಾಜ್ ಬೆನಕಲ್ ಹಾಗೂ ಸಂಗಮೇಶ್ ಬದವಡಗಿ ಅವರಿಗೆ ಸಾಹಿತಿ ಡಾ। ಎಚ್.ಎಲ್. ಹನುಮಂತಯ್ಯ ಸಾಹಿತ್ಯ ಸೇತು ಪ್ರಶಸ್ತಿ ನೀಡಿ ಗೌರವಿಸಿದರು.

ಪ್ರಜಾವಾಣಿ
ಶನಿವಾರ 7ನೇ ಜೂನ್ 2008



ಬೆಂಗಳೂರಿನ ಕನ್ನಡ ಭವನದ ನಯನ ಸಭಾಂಗಣದಲ್ಲಿ ಶುಕ್ರವಾರ ಹಮ್ಮಿಕೊಳ್ಳಲಾಗಿದ್ದ ಸಮಾರಂಭದಲ್ಲಿ ಅನಸೂಯ ದೇವಿ, ಡಾ. ಸುಜಾತಾ ಅಕ್ಕಿ ಮತ್ತು ಕೈವಾರ್ ಗೋಪಿನಾಥ್ ಅವರಿಗೆ 'ಸ್ನೇಹ ಸೇತು' ಪ್ರಶಸ್ತಿ ನೀಡಿ ಗೌರವಿಸಲಾಯಿತು. ಗಾಯಕ ವೀರೇಶ್ ಬಳ್ಳಾರಿ, ಸಮಾಜ ಸೇವಕ ವೂಡೆ ಪಿ.ಕೃಷ್ಣ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ನಿರ್ದೇಶಕ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ, ಸಾಹಿತಿ ಡಾ. ಸಂಧ್ಯಾರೆಡ್ಡಿ ಮತ್ತು ಕವಿ ಡಾ. ಎಲ್.ಹನುಮಂತಯ್ಯ ಸಮಾರಂಭದಲ್ಲಿ ಪಾಲ್ಗೊಂಡಿದ್ದರು.

–ಪ್ರಜಾವಾಣಿ ಚಿತ್ರ

ಬೆಂಗಳೂರು ವಿಜಯ | ಬುಧವಾರ, 28 ಮೇ 2008



ರೆಡ್ ಕ್ರಾಸ್ ಸಂಸ್ಥೆ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಮೂತ್ರರೋಗ ತಜ್ಞ ಡಾ. ಎಚ್.ಕೆ. ನಾಗರಾಜ್ ಅವರಿಗೆ ರೆಡ್ ಕ್ರಾಸ್ ಸೇವಾ ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು. ಲೋಕಾಯುಕ್ತ ಎನ್.ಸಂತೋಷ್ ಹೆಗ್ಡೆ, ಬೆಂಗಳೂರು ವಿವಿ ಕುಲಪತಿ ಡಾ.ಎಚ್.ಎ. ರಂಗನಾಥ್, ಸಂಸ್ಥೆಯ ಉಪಾಧ್ಯಕ್ಷ ವುಡೇ ಪಿ.ಕೃಷ್ಣ ಖಜಾಂಚಿ ರಾಜು ಚಂದ್ರಶೇಖರ್ ಹಾಗೂ ಪ್ರಧಾನ ಕಾರ್ಯದರ್ಶಿ ಡಾ.ಎನ್.ಜಿ. ನಾರಾಯಣ ಭಾಗವಹಿಸಿದ್ದರು.

ಬೆಂಗಳೂರು ವಿಜಯ | ಭಾನುವಾರ, 25 ಮೇ 2008

# ವಿದ್ಯೆಯನ್ನು ಆಸ್ತಿಯಾಗಿಸಿಕೊಳ್ಳಿ

**ಬೆಂಗಳೂರು:** ವಿದ್ಯಾರ್ಥಿಗಳೇ ಮುಂದಿನ ನಾಯಕರು, ಹಾಗಾಗಿ ಜೀವನದಲ್ಲಿ ಮುಖ್ಯ ಗುರಿಯಿರಬೇಕು. ಅದನ್ನು ಸಾಧಿಸುವ ಹಾದಿಯಲ್ಲಿ ಮುಂದೆ ಸಾಗಬೇಕು ಎಂದು ಡಾ. ವಿಜಯಲಕ್ಷ್ಮಿ ದೇಶಮಾನೆ ಕರೆ ನೀಡಿದರು.

ಮಾಗಡಿ ರಸ್ತೆಯ ಶೇಷಾದ್ರಿಪುರ ವಾಣಿಜ್ಯ ಪದವಿ ಕಾಲೇಜಿನ ವಾರ್ಷಿಕ ಸಮಾರಂಭದಲ್ಲಿ ಮಾತನಾಡುತ್ತಿದ್ದ ಅವರು, ಗುರಿ ಸಾಧನೆಯತ್ತ ನಿಮ್ಮ ಜೀವನ ಸಮಾಜಮುಖಿಯಾಗಿ ಸಾಗಲಿ. ಅದಕ್ಕಾಗಿ ನಿಮಗೆ ಬೇಕಾಗಿರುವುದು ಸಮಯಪ್ರಜ್ಞೆ, ಅದರ ಅರಿವು ಪಡೆದಾಗ ಮಾತ್ರ ಸಮಾಜದಲ್ಲಿ ಉತ್ತಮ ವ್ಯಕ್ತಿಗಳ ಸಾಲಿನಲ್ಲಿ ನಿಲ್ಲುತ್ತೀರಿ ಎಂದು ನುಡಿದರು.

ಸಮಾರಂಭದಲ್ಲಿ ಶೇಷಾದ್ರಿಪುರ ಶಿಕ್ಷಣ ದತ್ತಿಯ ಕಾರ್ಯದರ್ಶಿ ವೂಡೆ. ಪಿ. ಕೃಷ್ಣ ಮಾತನಾಡಿ, ಶಿಸ್ತುಬದ್ಧ ಜೀವನ ನಿಮ್ಮದಾಗಿಸಿಕೊಂಡಾಗ ನೀವು ಸಾಧನೆಯ ಉತ್ತುಂಗವನ್ನು ಏರಬಲ್ಲಿರಿ. ವಿದ್ಯೆಯನ್ನು ಆಸ್ತಿಯಾಗಿಸಿಕೊಳ್ಳಿ ಎಂದು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.



**ಶೇಷಾದ್ರಿಪುರ ವಾಣಿಜ್ಯ ಪದವಿ ಕಾಲೇಜಿನ ವಾರ್ಷಿಕೋತ್ಸವವನ್ನು ವೂಡೆ ಪಿ. ಕೃಷ್ಣ ಉದ್ಘಾಟಿಸಿದರು. ಡಾ. ವಿಜಯಲಕ್ಷ್ಮಿ ದೇಶಮಾನೆ, ಎಸ್. ಶೇಷನಾರಾಯಣ, ಜಯಶ್ರೀ ಜೆ. ಸಿಂಗ್ ಉಪಸ್ಥಿತರಿದ್ದರು.**

ಕಾರ್ಯಕ್ರಮದಲ್ಲಿ ಕಾಲೇಜಿನ ಅಧ್ಯಕ್ಷ ಎಸ್. ಶೇಷನಾರಾಯಣ, ಪ್ರಾಚಾರ್ಯೆ ಜಯಶ್ರೀ ಜೆ. ಸಿಂಗ್ ಅತಿಥಿಗಳಾಗಿ ಭಾಗವಹಿಸಿದ್ದರು.

ಕನ್ನಡ ಸಂಘದ ವತಿಯಿಂದ ಡಾ. ವಿಜಯಲಕ್ಷ್ಮಿ ದೇಶಮಾನೆಯವರನ್ನು ಸನ್ಮಾನಿಸಲಾಯಿತು. ಕಾಲೇಜಿನ ಉಪನ್ಯಾಸಕರು ಹಾಗೂ ವಿದ್ಯಾರ್ಥಿಗಳು ಸಮಾರಂಭದಲ್ಲಿ ಭಾಗವಹಿಸಿದ್ದರು.

ಸಂಜೆವಾಣಿ

ಭಾನುವಾರ 18 ಮೇ 2008

# ಸ್ವಯಂ ರಕ್ತದಾನಿಗಳ ಒಕ್ಕೂಟಕ್ಕೆ ರೆಡ್ ಕ್ರಾಸ್ ಪ್ರಶಸ್ತಿ

ಬೆಂಗಳೂರು, ಮೇ ೧೮- ವಿಶ್ವ ರೆಡ್ ಕ್ರಾಸ್ ದಿನಾಚರಣೆ ಸಂದರ್ಭದಲ್ಲಿ ಅತಿ ಹೆಚ್ಚು ರಕ್ತದಾನ ಶಿಬಿರಗಳನ್ನು ಏರ್ಪಡಿಸಿ ಬಡ ರೋಗಿಗಳಿಗೆ ರಕ್ತ ಪೂರೈಕೆ ಮಾಡುವಲ್ಲಿ ರೆಡ್ ಕ್ರಾಸ್ ನಿಧಿಗೆ ನೆರವಾದ ಹಿನ್ನೆಲೆಯಲ್ಲಿ ರ್ಣಾಟಕ ಸ್ವಯಂ ರಕ್ತದಾನಿಗಳ ಒಕ್ಕೂಟಕ್ಕೆ 2006-07 ಮತ್ತು 2007-08 ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಪ್ರಶಸ್ತಿಯನ್ನು ನ್ಯಾಯಮೂರ್ತಿಗಳು ಹಾಗೂ ಲೋಕಾಯುಕ್ತರಾದ ಸಂತೋಷ್ ಹೆಗ್ಡೆಯವರು, ಒಕ್ಕೂಟದ ಪ್ರಧಾನ ಕಾರ್ಯದರ್ಶಿ ಎಂ.ಎ. ಅಂಟೋನಿ, ಖಜಾಂಚಿ ಶಂಕರ್ ರಾವ್ ಹಾಗೂ ಆಡಳಿತ ಮಂಡಳಿ ಸದಸ್ಯ ಆರ್. ಅರುಣ್‌ರವರಿಗೆ ನೀಡಿದರು.

ಇದೇ ಸಂದರ್ಭದಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ಕುಲಪತಿ ಡಾ. ಹೆಚ್.ಎ. ರಂಗನಾಥ್, ರೆಡ್ ಉಪ ಸಭಾಧ್ಯಕ್ಷ ವೂಡೇ ಪಿ. ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್ ಹಾಗೂ ). ನಾರಾಯಣ ಉಪಸ್ಥಿತರಿದ್ದರು.



ಆರ್. ಅರುಣ್, ಎಂ.ಎ. ಅಂಟೋನಿ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಲೋಕಾಯುಕ್ತ ಸಂತೋಷ್ ಹೆಗ್ಡೆ, ಉಪಸಭಾಧ್ಯಕ್ಷ ವೂಡೇ ಪಿ. ಕೃಷ್ಣ, ಕುಲಪತಿ ಡಾ. ಹೆಚ್.ಎ. ರಂಗನಾಥ, ಶಂಕರ್‌ರಾವ್ ಹಾಗೂ ಡಾ. ಎನ್.ಜಿ. ನಾರಾಯಣ



ವಿಶ್ವ ರೆಡ್ ಕ್ರಾಸ್ ದಿನದ ಅಂಗವಾಗಿ ರಾಜ್ಯ ಸ್ವಯಂ ಪ್ರೇರಿತ ರಕ್ತದಾನಿಗಳ ಸಂಘಕ್ಕೆ 2007-08ನೇ ಸಾಲಿನ ವಾರ್ಷಿಕ ಪ್ರಶಸ್ತಿಯನ್ನು ಲೋಕಾಯುಕ್ತ ಸಂತೋಷ್ ಹೆಗಡೆ ಪ್ರದಾನ ಮಾಡಿದರು. ಬೆಂಗಳೂರು ವಿವಿ ಕುಲಪತಿ ಡಾ.ಎಚ್.ಎ.ರಂಗನಾಥ್, ಡಬ್ಲ್ಯು.ಪಿ ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್ ಡಾ. ಎನ್.ಜಿ.ನಾರಾಯಣ ಮತ್ತಿತರರಿದ್ದರು.



ಭಾರತ ಸೇವಾದಳ ಕೇಂದ್ರ ಸಮಿತಿ ಹಮ್ಮಿಕೊಂಡಿದ್ದ ಡಾ.ನಾ.ಸು.ಹರ್ಡೀಕರ್ 119ನೆ ಜನ್ಮದಿನ ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ ಕೋಶಾಧ್ಯಕ್ಷ ವೂಡೇ ಪಿ.ಕೃಷ್ಣ, ಸಿ.ಜಿ.ಸಿದ್ದಯ್ಯ , ಬಿ.ಸಿ.ವೆಂಕಟೇಶ್, ಡಾ.ಸುವರ್ಣಮೋದಿ ಇದ್ದರು.

ಈ ಸಂಜೆ ಮಂಗಳವಾರ, 13 ಮೇ, 2008




ಮೂತ್ರರೋಗತಜ್ಞ ಡಾ.ಎಚ್.ಕೆ.ನಾಗರಾಜ್ ಅವರಿಗೆ ವಿಶ್ವರೆಡ್‌ಕ್ರಾಸ್ ದಿನದ ಅಂಗವಾಗಿ ಸೇವಾ ಪ್ರಶಸ್ತಿ ನೀಡಲಾಯಿತು. ಲೋಕಾಯುಕ್ತ ಎನ್.ಸಂತೋಷ್ ಹೆಗಡೆ, ಬೆಂವಿವಿ ಕುಲಪತಿ ಡಾ.ಎಚ್.ಎ. ರಂಗನಾಥ್, ರೆಡ್‌ಕ್ರಾಸ್ ಉಪಾಧ್ಯಕ್ಷ ವೂಡೇ ಪಿ.ಕೃಷ್ಣ, ರಾಜು ಚಂದ್ರಶೇಖರ್ ಇತರರಿದ್ದರು.

ಕನ್ನಡಪ್ರಭ, ಸೋಮವಾರ, 12 ಮೇ 2008



## ಪ್ರಶಸ್ತಿ ಪ್ರದಾನ



ವಿಶ್ವ ರೆಡ್‌ಕ್ರಾಸ್ ದಿನಾಚರಣೆ ವೇಳೆ ಡಾ| ಎಚ್.ಕೆ. ನಾಗರಾಜ್ ಅವರಿಗೆ ರೆಡ್‌ಕ್ರಾಸ್ ಸೇವಾ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಲೋಕಾಯುಕ್ತ ನ್ಯಾ| ಎನ್. ಸಂತೋಷ್ ಹೆಗ್ಡೆ, ಕುಲಪತಿ ಡಾ| ಎಚ್.ಎ. ರಂಗನಾಥ್, ವೂಡೆ ಪಿ. ಕೃಷ್ಣ, ಚಂದ್ರಶೇಖರ್, ಎನ್.ಜಿ. ನಾರಾಯಣ ಹಾಜರಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು 11-5-2008

# ನಾ.ಸು. ಹರ್ಡೀಕರ್ ಜನ್ಮದಿನಾಚರಣೆ

ಬೆಂಗಳೂರು, ಮೇ 10– ಭಾರತ ಸೇವಾದಲ ಸಂಸ್ಥೆ ಸಂಸ್ಥಾಪಕ ಪದ್ಮಭೂಷಣ ಡಾ. ನಾ.ಸು. ಹರ್ಡೀಕರರ 119ನೇ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು.

ನಗರದ ಭಾರತ ಸೇವಾದಲದ ಕಚೇರಿಯಲ್ಲಿ ಹಮ್ಮಿಕೊಂಡಿದ್ದ ಹರ್ಡೀಕರರ ಜನ್ಮ ದಿನಾಚರಣೆ ಸಮಾರಂಭವನ್ನು ಉದ್ಘಾಟಿಸಿದ ಸಂಸ್ಥೆ ಕೋಶಾಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿ, ಬಾಲಗಂಗಾಧರ ತಿಲಕ್, ಲಾಲ ಲಜಪತರಾಯ್ ಅವರುಗಳ ಮಾರ್ಗದರ್ಶನದ ಪ್ರೇರಣೆಯಿಂದ ಡಾ. ಹರ್ಡೀಕರ್ ದೇಶದ ಯುವ ಜನಾಂಗಕ್ಕೆ ರಾಷ್ಟ್ರಾಭಿಮಾನದ ಶಿಕ್ಷಣ ನೀಡಲು ಸಾಧ್ಯವಾಯಿತು ಎಂದು ಅಭಿಪ್ರಾಯಪಟ್ಟರು.

ಹಿರಿಯ ಗಾಂಧಿವಾದಿ ಡಾ. ಹೊ. ಶ್ರೀನಿವಾಸಯ್ಯ ಮಾತನಾಡಿ, ಶಿಸ್ತು, ಸಂಯಮ, ಸರಳತೆಗಳನ್ನು ಹರ್ಡೀಕರ್ ರೂಡಿಸಿಕೊಂಡಿದ್ದರು. ಅದನ್ನು ಇಂದಿನ ಜನತೆ ಅಳವಡಿಸಿಕೊಳ್ಳಬೇಕಾದುದು ಅವಶ್ಯಕ ಎಂದರಲ್ಲದೆ, ಡಾ. ಹರ್ಡೀಕರ್ ಅವರ ಜೀವನ ಚರಿತ್ರೆಯ ಪುಸ್ತಕವನ್ನು ಎಲ್ಲರೂ ಅಧ್ಯಯನ ಮಾಡಿದರೆ ಸ್ವಲ್ಪ ಮಟ್ಟಿಗಾದರೂ ಅವರು ಹಾಕಿಕೊಟ್ಟ ಮಾರ್ಗದರ್ಶನದಲ್ಲಿ ನಡೆಯಬಹುದು ಎಂದರು. ಸಂಸ್ಥೆ ಉಪಾಧ್ಯಕ್ಷ ಬಿ.ಸಿ. ವೆಂಕಟೇಶ್ ಅಧ್ಯಕ್ಷತೆ ವಹಿಸಿದ್ದರು. ಡಾ. ನಾ.ಸು. ಹರ್ಡೀಕರ್ ಶಾಲೆ ಆಡಳಿತಾಧಿಕಾರಿ ವಿ.ಕೆ. ಉದ್ಯಾವರ ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಕೇಂದ್ರ ಕಾರ್ಯಕಾರಿ ಸಮಿತಿ ಸದಸ್ಯರಾದ ಸುವರ್ಣ ಮೋದಿ ಜಿ. ಮುನಿಸ್ವಾಮಿ, ಹಿರಿಯ ಕಾರ್ಯಕರ್ತರುಗಳಾದ ಭೀಮರಾವ್ ಗಾಯಕ್‌ವಾಡ, ಕರ್ನಾಟಕ ವೀರ ಕನ್ನಡಿಗರ ಸಂಘದ ಅಧ್ಯಕ್ಷ ಎಚ್.ಎಂ. ರಂಗೇಗೌಡ, ಶೇಷಾದ್ರಿಪುರ ಶಾಲೆ ನಿವೃತ್ತ ಮುಖ್ಯೋಪಾಧ್ಯಾಯ ಶಿವಕುಮಾರ್ ಆರಾಧ್ಯ, ಸಂಸ್ಥೆ ಯೋಜನಾಧಿಕಾರಿ ಎಸ್. ಲಿಂಗಪ್ಪ, ಶಾಖಾ ನಾಯಕ ಮನೋಹರ್ ಮತ್ತಿತರರು ಉಪಸ್ಥಿತರಿದ್ದರು.

ಈ ಸಂಜೆ
ಭಾನುವಾರ 11 ಮೇ 2008




ಶೇಷಾದ್ರಿಪುರಂ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳಿಗೆ ಶೇಷಾದ್ರಿಪುರಂ ಶಿಕ್ಷಣದತ್ತಿ ಗೌರವ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಆಯ್ಕೆಪತ್ರ ವಿತರಿಸಿದರು. ಪ್ರಾಂಶುಪಾಲ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ , ಟ್ರಸ್ಟಿ ರಾಮಕೃಷ್ಣ, ಪ್ರೊ.ಎಸ್.ಎನ್.ದೊರೆರಾಜು ಇದ್ದರು.

ವಿಜಯ ಕರ್ನಾಟಕ | ಶನಿವಾರ 10 ಮೇ 2008 | ಬೆಂಗಳೂರು

# ರೆಡ್‌ಕ್ರಾಸ್‌ನ ಸೇವಾ ಮನೋಭಾವ ವೈದ್ಯರಿಗೆ ಮಾದರಿ

ವಿಕ ಸುದ್ದಿಲೋಕ

ಬೆಂಗಳೂರು: ಸರಕಾರಿ ಇಲಾಖೆ ಹಾಗೂ ಆಸ್ಪತ್ರೆಗಳಲ್ಲಿ ಸೇವೆ ಸಲ್ಲಿಸುವ ಅಧಿಕಾರಿಗಳು, ವೈದ್ಯರು ರೆಡ್‌ಕ್ರಾಸ್ ಸಂಸ್ಥೆಯವರ ಸೇವಾ ಮನೋಭಾವದಿಂದ ಕಲಿಯುವುದು ಬಹಳವಿದೆ ಎಂದು ಲೋಕಾಯುಕ್ತ ನ್ಯಾ. ಸಂತೋಷ್ ಹೆಗ್ಡೆ ಅಭಿಪ್ರಾಯಪಟ್ಟರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಯು ನಗರದಲ್ಲಿ ಗುರುವಾರ ಆಯೋಜಿಸಿದ್ದ ವಿಶ್ವ ರೆಡ್‌ಕ್ರಾಸ್ ದಿನಾಚರಣೆ ಉದ್ಘಾಟಿಸಿ ಮಾತನಾಡಿದರು.

ವಿಧಾನಸೌಧ ಹಾಗೂ ಸರಕಾರಿ ಆಸ್ಪತ್ರೆಗಳಲ್ಲಿ ಕೆಲಸ ಮಾಡುವ ಅಧಿಕಾರಿಗಳು-ವೈದ್ಯರಿಗೆ ಬಡವರ ಕಷ್ಟ ಅರ್ಥವಾಗುತ್ತಿಲ್ಲ. ಜನರ ಸೇವೆ ಮಾಡಲೆಂದು ಸರಕಾರದಿಂದ ನೇಮಕ ಗೊಂಡಿದ್ದರೂ ಅವರಲ್ಲಿ ಅನೇಕರು ತಮ್ಮ ಜವಾಬ್ದಾರಿಯನ್ನೇ ಮರೆತಿದ್ದಾರೆ. ಅಂಥವರಲ್ಲಿ ಸ್ವಲ್ಪವೂ ಮಾನವೀಯ ಗುಣ ಇಲ್ಲದಿರುವುದು ವಿಪರ್ಯಾಸ. ಹೀಗಿರುವಾಗ ಯಾರ ಬೆಂಬಲ, ಸೌಕರ್ಯಗಳಿಲ್ಲದೆ ಸಮಾಜದಲ್ಲಿ ನೊಂದವರ ಸೇವೆಯಲ್ಲಿ ತೊಡಗಿರುವ ರೆಡ್‌ಕ್ರಾಸ್ ಸಂಸ್ಥೆ ಕಾರ್ಯವೈಖರಿ ಶ್ಲಾಘನೀಯ ಎಂದರು.

ಬೆಂಗಳೂರು ವಿವಿ ಕುಲಪತಿ ಡಾ.ಎಚ್.ಎ. ರಂಗನಾಥ್ ಮಾತನಾಡಿದರು. ಸೇವಾ ಚಟುವಟಿಕೆಗಳಲ್ಲಿ ಗಮನಾರ್ಹ ಸಾಧನೆ ತೋರಿಸಿದ ರೆಡ್‌ಕ್ರಾಸ್ ಸಂಸ್ಥೆಯ ದಕ್ಷಿಣ ಕನ್ನಡ, ಬೆಳಗಾವಿ ಹಾಗೂ ಮಂಡ್ಯ ಘಟಕಕ್ಕೆ ವಿಶೇಷ ಪ್ರಶಸ್ತಿ ನೀಡಲಾಯಿತು. ತುಮಕೂರು ಮತ್ತು ಗುಲ್ಬರ್ಗ ಶಾಖೆಯನ್ನು ಮಾದರಿ ಶಾಖೆಯಾಗಿ ಗುರುತಿಸಲಾಯಿತು. ಆರೋಗ್ಯ ಸೇವೆಗಾಗಿ ಡಾ.ಕೆ.ಎಚ್. ನಾಗರಾಜ್ ಅವರನ್ನು ಅಭಿನಂದಿಸಲಾಯಿತು. ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಡಾ.ಎನ್.ಜಿ. ನಾರಾಯಣ, ಗೌರವ ಖಜಾಂಚಿ ರಾಜು ಚಂದ್ರಶೇಖರ್ ಉಪಸ್ಥಿತರಿದ್ದರು.



ವಿಶ್ವ ರೆಡ್‌ಕ್ರಾಸ್ ದಿನಾಚರಣೆ ಅಂಗವಾಗಿ ವಿಕಲಚೇತನರಿಗೆ ಸಲಕರಣೆ ವಿತರಿಸಲಾಯಿತು.

ಪ್ರಜಾವಾಣಿ
ಶನಿವಾರ 10ನೇ ಮೇ 2008

# 'ರೆಡ್ ಕ್ರಾಸ್ ಸಂಸ್ಥೆ ಸೇವೆ ಪಠ್ಯ ಅಳವಡಿಕೆ ಅಗತ್ಯ'

ಬೆಂಗಳೂರು: 'ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಸೇವಾ ಚಟುವಟಿಕೆಗಳ ಬಗ್ಗೆ ಶಾಲಾ ಹಂತದಲ್ಲಿ ಪಠ್ಯಕ್ರಮವನ್ನಾಗಿ ಅಳವಡಿಸುವ ಅಗತ್ಯ ಇದೆ' ಎಂದು ಲೋಕಾಯುಕ್ತ ನ್ಯಾಯಮೂರ್ತಿ ಎನ್. ಸಂತೋಷ ಹೆಗ್ಡೆ ಗುರುವಾರ ಹೇಳಿದರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯು ಏರ್ಪಡಿಸಿದ್ದ 'ವಿಶ್ವ ರೆಡ್ ಕ್ರಾಸ್ ದಿನಾಚರಣೆ' ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿ ಪ್ರೊ. ಎಚ್.ಎ. ರಂಗನಾಥ್, ಸಂಸ್ಥೆಯ ಖಜಾಂಚಿ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ ಮಾತನಾಡಿದರು. ಸಂಸ್ಥೆಯ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಅಧ್ಯಕ್ಷತೆವಹಿಸಿದ್ದರು.

ಅಭಿನಂದನೆ: ಸಮುದಾಯಕ್ಕೆ ಸಲ್ಲಿಸುತ್ತಿರುವ ಆರೋಗ್ಯ ಸೇವೆಯನ್ನು ಗುರುತಿಸಿ ಡಾ. ಎಚ್.ಕೆ. ನಾಗರಾಜ್, ಸುನಾಮಿ ದುರಂತದ ಸಂತ್ರಸ್ಥರ ಪುನರ್ವಸತಿ ಕಾರ್ಯದಲ್ಲಿ ಸ್ವಯಂ ಸೇವಕರಾಗಿ ಸೇವೆ ಸಲ್ಲಿಸಿದ ರಾಜು ಚಂದ್ರಶೇಖರ್ ಹಾಗೂ ಕೆ.ಸಿ. ಶಿವರುದ್ರ ಶೆಟ್ಟಿ ಅವರಿಗೆ ಅಭಿನಂದಿಸಲಾಯಿತು.

2007-08ನೇ ಸಾಲಿನಲ್ಲಿ ಮಾಡಿದ ವಿಶೇಷ ಕಾರ್ಯಚಟುವಟಿಕೆಗಳನ್ನು ಗುರುತಿಸಿ ತುಮಕೂರು ಮತ್ತು ಗುಲ್ಬರ್ಗ ಜಿಲ್ಲಾ ರೆಡ್ ಕ್ರಾಸ್ ಶಾಖೆಗಳಿಗೆ ಪ್ರಶಸ್ತಿ ವಿತರಿಸಲಾಯಿತು.

ಅಲ್ಲದೆ ಅತ್ಯುತ್ತಮ ಜಿಲ್ಲಾ ರೆಡ್ ಕ್ರಾಸ್ ಶಾಖೆಗಳು ಎಂದು ದಕ್ಷಿಣ ಕನ್ನಡ, ಬೆಳಗಾವಿ ಮತ್ತು ಮಂಡ್ಯ ಜಿಲ್ಲಾ ಶಾಖೆಗಳಿಗೆ ಪ್ರಶಸ್ತಿ ನೀಡಲಾಯಿತು. ಇದೇ ಸಂದರ್ಭದಲ್ಲಿ ಸಂಸ್ಥೆಯ ರಕ್ತನಿಧಿಗೆ ಅತ್ಯುನ್ನತ ಮಟ್ಟದಲ್ಲಿ ರಕ್ತದಾನ ಶಿಬಿರಗಳನ್ನು ಏರ್ಪಡಿಸಿದ್ದಕ್ಕಾಗಿ ಪ್ರಶಸ್ತಿ ನೀಡಲಾಯಿತು.




ವಿಶ್ವ ರೆಡ್‌ಕ್ರಾಸ್ ದಿನಾಚರಣೆ ಅಂಗವಾಗಿ ಬೆಂಗಳೂರಿನ 'ಭಾರತೀಯ ರೆಡ್‌ಕ್ರಾಸ್ ಸಂಸ್ಥೆ' ಶುಕ್ರವಾರ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಮೂತ್ರರೋಗ ತಜ್ಞ ಡಾ. ಎಚ್.ಕೆ. ನಾಗರಾಜ್ ಅವರಿಗೆ ಬೆಂಗಳೂರು ವಿವಿ ಕುಲಪತಿ ಡಾ. ಎಚ್.ಎ.ರಂಗನಾಥ ಅವರು 'ರೆಡ್ ಕ್ರಾಸ್ ಸೇವಾ ಪ್ರಶಸ್ತಿ' ನೀಡಿ ಗೌರವಿಸಿದರು. ಲೋಕಾಯುಕ್ತ ನ್ಯಾಯಮೂರ್ತಿ ಸಂತೋಷ ಹೆಗ್ಡೆ, ಸಂಸ್ಥೆಯ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ, ಖಜಾಂಚಿ ರಾಜು ಚಂದ್ರಶೇಖರ, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ ಬೆಂಗಳೂರು

10-5-2008




ವಿಶ್ವ ರೆಡ್‌ಕ್ರಾಸ್ ದಿನಾಚರಣೆ ಅಂಗವಾಗಿ ಖ್ಯಾತ ಮೂತ್ರರೋಗ ತಜ್ಞ ಡಾ. ಎಚ್.ಕೆ. ನಾಗರಾಜ್ ಅವರಿಗೆ ಬೆಂಗಳೂರು ವಿಶ್ವವಿದ್ಯಾಲಯ ಕುಲಪತಿ ಡಾ. ಎಚ್.ಎ. ರಂಗನಾಥ್ ಅವರು ರೆಡ್‌ಕ್ರಾಸ್ ಸೇವಾ ಪ್ರಶಸ್ತಿ ನೀಡಿ ಗೌರವಿಸಿದರು. ಈ ಸಂದರ್ಭದಲ್ಲಿ ರೆಡ್‌ಕ್ರಾಸ್ ಸಂಸ್ಥೆಯ ರಾಜು ಚಂದ್ರಶೇಖರ್, ಲೋಕಾಯುಕ್ತ ನ್ಯಾಯಮೂರ್ತಿ ಸಂತೋಷ್ ಹೆಗ್ಡೆ, ಡಾ. ಎನ್.ಜಿ. ನಾರಾಯಣ, ವೂಡೇ ಪಿ. ಕೃಷ್ಣ ಉಪಸ್ಥಿತರಿದ್ದರು.

ಶುಕ್ರವಾರ 9-5-2008 UDAYAVANI - BANGALORE ಉದಯವಾಣಿ

# ರೆಡ್‌ಕ್ರಾಸ್ ಘಟಕಗಳಿಗೆ ಪ್ರಶಸ್ತಿ ಪ್ರದಾನ

ಬೆಂಗಳೂರು, ಮೇ 8: ಸಾರ್ವಜನಿಕರಿಗೆ ಅನುಪಮ ಸೇವೆ ಮಾಡಿದ ತುಮಕೂರು ಹಾಗೂ ಗುಲ್ಬರ್ಗಾದ ರೆಡ್‌ಕ್ರಾಸ್ ಘಟಕಗಳಿಗೆ 'ರೋಲ್ ಮಾಡೆಲ್ ಶಾಖೆ' ಎಂಬ ಪ್ರಶಸ್ತಿಯನ್ನು ಇಂದು ಪ್ರದಾನ ಮಾಡಲಾಯಿತು.

ರೆಡ್‌ಕ್ರಾಸ್ ದಿನಾಚರಣೆ ಅಂಗವಾಗಿ ನಗರದಲ್ಲಿ ನಡೆದ ಕಾರ್ಯಕ್ರಮದಲ್ಲಿ ಲೋಕಾಯುಕ್ತ ನ್ಯಾಯಮೂರ್ತಿ ಸಂತೋಷ ಹೆಗ್ಡೆ, ಈ ಪ್ರಶಸ್ತಿ ನೀಡಿ ಗೌರವಿಸಿದರು. ದಕ್ಷಿಣ ಕನ್ನಡ, ಬೆಳಗಾಂ ಹಾಗೂ ಮಂಡ್ಯ ಜಿಲ್ಲಾಘಟಕಗಳಿಗೆ 'ಅತ್ಯುತ್ತಮಶಾಖೆ' ಎಂಬ ಪ್ರಶಸ್ತಿಯನ್ನು ನೀಡಲಾಯಿತು. ಸಮಾಜಸೇವೆಯಲ್ಲಿ ನಿಸ್ಪೃಹವಾಗಿ ತೊಡಗಿಸಿಕೊಂಡ ವೈದ್ಯ ಎಚ್.ಕೆ. ನಾಗರಾಜು, ರಾಜು ಚಂದ್ರಶೇಖರ್, ಕೆ.ಸಿ. ಶಿವರುದ್ರ ಶೆಟ್ಟಿ ಅವರನ್ನು ಪುರಸ್ಕರಿಸಲಾಯಿತು. ಅಂಗವಿಕಲರಿಗೆ ವಿವಿಧ ಸೌಲಭ್ಯಗಳನ್ನು ನ್ಯಾ|ಸಂತೋಷ ಹೆಗ್ಡೆ ವಿತರಿಸಿದರು.

ಸಂತೋಷಹೆಗ್ಡೆ ಮಾತನಾಡಿ, ವಿಧಾನಸೌಧ ಹಾಗೂ ಆಸ್ಪತ್ರೆಯಲ್ಲಿ ಕುಳಿತವರಿಗೆ ಸೇವಾ ಮನೋಭಾವ ಹಾಗೂ ಜನರ ಕಷ್ಟಗಳ ಅರಿವಿರುವುದಿಲ್ಲ. ರೆಡ್‌ಕ್ರಾಸ್‌ನಂತಹ ಸಂಸ್ಥೆಗಳ ಕೆಲಸ ನೋಡಿ ಅವರು ಕಲಿಯಬೇಕಿದೆ ಎಂದು ಸಲಹೆ ನೀಡಿದರು.

ಏನಾದರೂ ಆಗು ಮೊದಲ ಮಾನವನಾಗು ಎಂಬ ಕವಿವಾಣಿಯೇ ರೆಡ್‌ಕ್ರಾಸ್‌ನ ಧ್ಯೇಯವಾಗಿದೆ. ಇಂತಹ ಸಂಸ್ಥೆಗಳ ಕಾರ್ಯವೈಖರಿಯನ್ನು ಶಾಲಾ ಪಠ್ಯಗಳಲ್ಲಿ ಸೇರಿಸುವ ಕೆಲಸವನ್ನು ಸರ್ಕಾರ ಮಾಡಬೇಕಿದೆ. ಇದರಿಂದ ಬೆಳೆಯುವ ಮಕ್ಕಳಿಗೆ ಸೇವಾಮನೋಭಾವ ಮೂಡಲು ಸಾಧ್ಯವಾಗುತ್ತದೆ. ಅಂಗವಿಕಲರು ಇತರರಂತೆ ಸಮಾನರಾಗಿ ಬದುಕಬೇಕಾದರೆ ಅವರಿಗೆ ಅಗತ್ಯ ಸಾಧನಗಳನ್ನು ನೀಡಬೇಕಾದ ಹೊಣೆಗಾರಿಕೆ ಸರ್ಕಾರದ್ದಾಗಿದೆ ಎಂದು ಅಭಿಪ್ರಾಯಪಟ್ಟರು.

ದಿನಾಚರಣೆ ಉದ್ಘಾಟಿಸಿದ ಬೆಂಗಳೂರು ವಿ.ವಿ. ಕುಲಪತಿ ಡಾ| ಎಚ್.ಎ. ರಂಗನಾಥ್, ಮಾನವೀಯ ಮೌಲ್ಯ; ನೈಸರ್ಗಿಕ ವಿಕೋಪ ಹಾಗೂ ಮಾನವನಿಂದಾಗುವ ಪ್ರಕೋಪಗಳ ಸಂದರ್ಭದಲ್ಲಿ ರೆಡ್‌ಕ್ರಾಸ್ ಮಾಡುತ್ತಿರುವ ಸೇವೆ ಅತ್ಯಂತ ಮಹತ್ವವಾದುದು. ಅದರ ದರ್ಶನ ಹಾಗೂ ಕಾರ್ಯತತ್ಪರತೆ ಸಂಕಷ್ಟದಲ್ಲಿರುವವರಿಗೆ ಮಾನವೀಯ ಅಂತಃಕರಣದಿಂದ ಸ್ಪಂದಿಸುವ ಆಶಯವನ್ನು ಒಳಗೊಂಡಿದೆ ಎಂದು ಶ್ಲಾಘಿಸಿದರು.

ರೆಡ್‌ಕ್ರಾಸ್ ಅಧ್ಯಕ್ಷ ವೂಡೇ ಪಿ. ಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ಪ್ರಧಾನಕಾರ್ಯದರ್ಶಿ ಡಾ| ಎನ್.ಜಿ. ನಾರಾಯಣ ಉಪಸ್ಥಿತರಿದ್ದು, ಖಜಾಂಚಿ ರಾಜು ಚಂದ್ರಶೇಖರ್ ಸ್ವಾಗತಿಸಿದರು.

ವಿಜಯ ಕರ್ನಾಟಕ | ಶನಿವಾರ 3 ಮೇ 2008 | ಬೆಂಗಳೂರು

# ರಾಜಕೀಯ ಪಕ್ಷಗಳಿಂದ ಬರೀ ಸುಳ್ಳು ಭರವಸೆ

ವಿಕ ಸುದ್ದಿಲೋಕ

ಬೆಂಗಳೂರು: ಚುನಾವಣಾ ಪ್ರಣಾಳಿಕೆಯಲ್ಲಿ ಅಸಾಧ್ಯವಾದುದನ್ನು ಸಾಧ್ಯವೆಂಬಂತೆ ಬಿಂಬಿಸಿ ರಾಜಕೀಯ ಪಕ್ಷಗಳು ಜನರಿಗೆ ಸುಳ್ಳು ಭರವಸೆ ನೀಡುತ್ತಿವೆ ಎಂದು ಲೋಕಾಯುಕ್ತ ನ್ಯಾ. ಎನ್ .ಸಂತೋಷ್ ಹೆಗ್ಡೆ ಹೇಳಿದರು.

ಶೇಷಾದ್ರಿಪುರ ಕಾಲೇಜಿನಲ್ಲಿ ಶುಕ್ರವಾರ ಏರ್ಪಡಿಸಲಾಗಿದ್ದ ಕಾರ್ಯಕ್ರಮದಲ್ಲಿ ವಿವೇಕ ಯುಗ ಫೌಂಡೇಷನ್‌ನ ಡ್ರೀಮ್ ಕ್ರಿಯೇಷನ್ಸ್ ಹೊರತಂದಿರುವ 'ಪವರ್ ಆಫ್ ವೋಟ್' ಸಿ.ಡಿ. ಬಿಡುಗಡೆ ಮಾಡಿ ಮಾತನಾಡಿದರು.

'ರಾಜಕೀಯ ಪಕ್ಷಗಳ ಚುನಾವಣಾ ಪ್ರಣಾಳಿಕೆ ಗಮನಿಸಿದರೆ ಬರೀ ಸುಳ್ಳು ಭರವಸೆಗಳೇ ಕಾಣುತ್ತವೆ. ಒಂದಾದರೂ ಸತ್ಯಕ್ಕೆ ಹತ್ತಿರವಾದ ಭರವಸೆಗಳನ್ನು ಅವು ನೀಡಿಲ್ಲ. ಇಂತಹ ಪ್ರಣಾಳಿಕೆಗಳಿಂದ ಜನ ಏನನ್ನು ನಿರೀಕ್ಷಿಸಬಹುದು' ಎಂದರು.

'ಮಧ್ಯಮ ವರ್ಗದ ಜನ ಮತದಾನ ಮಾಡಿದರೆ ರಾಜಕೀಯ ಚಿತ್ರಣವನ್ನೇ ಬದಲಾಯಿಸಬಹುದು. ಸ್ಪರ್ಧಿಸುವವರಲ್ಲಿ ಉತ್ತಮರಿಗೆ ಮತ ನೀಡಿದರೆ ಮುಂದಿನ ವರ್ಷಗಳಲ್ಲಿ ಬದಲಾವಣೆ ಖಚಿತ' ಎಂದು ಅಭಿಪ್ರಾಯಪಟ್ಟರು.

ಜಂಟಿ ಪೊಲೀಸ್ ಆಯುಕ್ತ ಗೋಪಾಲ್ ಹೊಸೂರ್, 'ಕಳೆದ ಹತ್ತು ತಿಂಗಳಲ್ಲಿ 852 ಜನ ರೌಡಿ ಪಟ್ಟಿಯಲ್ಲಿರುವ ಕುಖ್ಯಾತರನ್ನು ಬಂಧಿಸಲಾಗಿದೆ. ಅವರನ್ನು ಬಿಡುಗಡೆ ಮಾಡುವಂತೆ ರಾಜಕಾರಣಿ ಗಳಿಂದ ಒತ್ತಡ ಬಂದಿದೆ. ಇಂತಹ ಸನ್ನಿವೇಶದಲ್ಲಿ ರಾಜಕಾರಣಿಗಳಿಂದ ಸಮಾಜಕ್ಕೆ ಒಳ್ಳೆಯದಾಗುತ್ತದೆ ಎಂದು ನಿರೀಕ್ಷಿಸಲು ಸಾಧ್ಯವೇ?' ಎಂದರು.

ಕಾಲೇಜು ಪ್ರಾಂಶುಪಾಲ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ, ಕ್ರಿಯೇಟಿವ್ ಟೀಚಿಂಗ್ ಸಂಸ್ಥೆಯ ಅಧ್ಯಕ್ಷ ಡಾ.ಗುರುರಾಜ ಕರ್ಜಗಿ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ವಿವೇಕಯುಗ ಫೌಂಡೇಷನ್ ಅಧ್ಯಕ್ಷ ಡಿ.ಎಂ.ಹೆಗಡೆ ಪಾಲ್ಗೊಂಡಿದ್ದರು.

ವಿಕ ಚಿತ್ರಲೋಕ



**ಶೇಷಾದ್ರಿಪುರ ಕಾಲೇಜಿನಲ್ಲಿ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ವಿವೇಕಯುಗ ಫೌಂಡೇಷನ್ ಹೊರತಂದಿರುವ 'ಪವರ್ ಆಫ್ ವೋಟ್' ಸಿ.ಡಿ.ಯನ್ನು ಲೋಕಾಯುಕ್ತ ನ್ಯಾ.ಎನ್. ಸಂತೋಷ್ ಹೆಗ್ಡೆ ಬಿಡುಗಡೆ ಮಾಡಿದರು. ಗೋಪಾಲ್ ಹೊಸೂರ್, ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ, ಡಾ.ಗುರುರಾಜ ಕರ್ಜಗಿ, ವೂಡೆ ಪಿ.ಕೃಷ್ಣ ಡಿ.ಎಂ.ಹೆಗಡೆ ಪಾಲ್ಗೊಂಡಿದ್ದರು.**

ದಿ ಟೈಮ್ಸ್ ಆಫ್ ಇಂಡಿಯಾ, ಬೆಂಗಳೂರು
ಶನಿವಾರ, ಮೇ 3, 2008

# ವಿದ್ಯಾವಂತರೆ, ಮಧ್ಯಮವರ್ಗದವರೇ ಮತದಾನ ಮಾಡಿ

ಟೈಮ್ಸ್ ನ್ಯೂಸ್ ನೆಟ್‌ವರ್ಕ್

**ಬೆಂಗಳೂರು:** 'ಸುಶಿಕ್ಷಿತರೇ ವೋಟ್ ಮಾಡಿ; ಈ ಮೂಲಕ ರಾಜಕೀಯ ಭವಿಷ್ಯ ಬದಲಾಯಿಸಿ' ಎಂದು ಮತದಾರರಿಗೆ ಕರೆ ನೀಡಲು ಕಿರುಚಿತ್ರದ ಡಿವಿಡಿಯೊಂದು ತಯಾರಾಗಿದೆ.

ಡ್ರೀಮ್ ಕ್ರಿಯೇಷನ್ಸ್ ಹಾಗೂ ವಿವೇಕಯುಗ ಸಂಸ್ಥೆ ವಿದ್ಯಾವಂತರಿಗೆ ಹಾಗೂ ಮಧ್ಯಮವರ್ಗದ ಜನತೆಗೆ ಮತದಾನದ ಮಹತ್ವದ ಬಗ್ಗೆ ಅರಿವು ಮೂಡಿಸಲು ಪ್ರಯತ್ನಿಸಿದೆ.

## ಡಿವಿಡಿ ಮೂಲಕ ಮನವಿ

ದೇಶದ ಸ್ವಾತಂತ್ರ್ಯಕ್ಕಾಗಿ ಮಹಾತ್ಮಾ ಗಾಂಧಿಯ ಹೋರಾಟ ಹಾಗೂ ಇಂದಿನವರೆಗೆ ರಾಜಕೀಯ ಬೆಳವಣಿಗೆ ಕಿರುಚಿತ್ರದಲ್ಲಿ ಅಡಕವಾಗಿದೆ. ಜೊತೆಗೆ ಮತದಾರರರಿಗೆ ಮಾಹಿತಿ ನೀಡಲು ಚುನಾವಣಾ ವಿಧಾನ, ಯಾವ ರೀತಿ ನಾಯಕರನ್ನು ಆರಿಸಬೇಕು ಎಂಬ ಬಗ್ಗೆ ಅರಿವು ನೀಡುವ ಮಾಹಿತಿಗಳೂ ಉಂಟು. ಕಿರುಚಿತ್ರ 25 ನಿಮಿಷ ಅವಧಿಯದಾಗಿದ್ದು, ಶಿಕ್ಷಣ ತಜ್ಞ ಡಾ.ಗುರುರಾಜ ಕರ್ಜಗಿ ಹಾಗೂ ವಿವೇಕಯುಗ ಸಂಸ್ಥೆಯ ಅಧ್ಯಕ್ಷ ಡಿ.ಎಂ.ಹೆಗಡೆ ನಿರೂಪಣೆ ಮಾಡಿದ್ದಾರೆ.

ಈ ಡಿವಿಡಿಯನ್ನು ಕಾಲೇಜು, ಯೂತ್‌ಕ್ಲಬ್ ಹಾಗೂ ಸರ್ಕಾರೇತರ ಸಂಸ್ಥೆಗಳಿಗೆ ನೀಡಿ ಜನಸಾಮಾನ್ಯರಿಗೂ ತಲುಪಿಸುವ ವ್ಯವಸ್ಥೆ ಮಾಡಲಾಗುವುದು.

ಡಿವಿಡಿ ಬಿಡುಗಡೆ ಮಾಡಿದ ಲೋಕಾಯುಕ್ತ ನ್ಯಾ. ಸಂತೋಷ್ ಹೆಗಡೆ, ಮಧ್ಯಮ ವರ್ಗ ಹಾಗೂ ವಿದ್ಯಾವಂತರ ಮತಗಳಿಗೆ ರಾಜಕೀಯದಲ್ಲಿ ಸಿಗುವ ಪ್ರಾಶಸ್ತ್ಯ ಅತ್ಯಂತ ನಗಣ್ಯ. ನಮಗೆ ಮಸಾಲೆ ದೋಸೆ ತಿನ್ನುವವರ ಓಟು ಬೇಡ. ನಮಗೆ ಬೇಕಿರುವುದು ರಾಗಿ ಮುದ್ದೆ, ಸಾರು ತಿನ್ನುವವರ ಮತವೆಂದು ರಾಜಕಾರಣಿಗಳು ನೇರವಾಗಿ ಹೇಳುತ್ತಿರುವಾಗ ಇತರ ವರ್ಗದವರಿಗೆ ರಾಜಕಾರಣದಲ್ಲಿ ಸಿಗುವ ಪ್ರಾಮುಖ್ಯತೆ ಬಗ್ಗೆ ಅರಿವಾಗುತ್ತದೆ ಎಂದರು.

ಹೆಚ್ಚಿನ ಸಂಖ್ಯೆಯಲ್ಲಿರುವ ಕೊಳೆಗೇರಿ ಹಾಗೂ ಬಡಜನರ ಓಟನ್ನು ಪಡೆಯಲು ಆಸಕ್ತಿ ವಹಿಸುವ ರಾಜಕಾರಣಿಗಳು ವಿದ್ಯಾವಂತರಿಗೆ ಯಾವ ಬೆಲೆಯನ್ನೂ ನೀಡುವುದಿಲ್ಲ. ಈ ಕಾರಣದಿಂದ ಹೆಚ್ಚಿನ ನಾಗರಿಕರು ಮತ ಹಾಕುತ್ತಿಲ್ಲ. ಆದರೆ ಮಧ್ಯಮ ವರ್ಗ ಹಾಗೂ ವಿದ್ಯಾವಂತರು ಮತದಾನ ಮಾಡಲು ಸಂಕಲ್ಪ ಮಾಡಿದರೆ ರಾಜಕೀಯ ಚಿತ್ರಣ ಬದಲಿಸಬಹುದು ಎಂದರು.



ರಾಧಾಕೃಷ್ಣ

**ವೋಟ್ ಪ್ಲೀಸ್: ಪವರ್ ಆಫ್ ವೋಟ್ ಡಿವಿಡಿ ಬಿಡುಗಡೆ ಮಾಡುತ್ತಿರುವ ನ್ಯಾ.ಸಂತೋಷ್ ಹೆಗಡೆ, ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ, ಪಿ. ಕೃಷ್ಣ, ಗೋಪಾಲ್ ಬಿ.ಹೊಸೂರು, ಡಿ.ಎಂ.ಹೆಗಡೆ.**

ಉದಯವಾಣಿ

ಶನಿವಾರ 3 ಮೇ 2008




ಬೆಂಗಳೂರಿನಲ್ಲಿ ಶುಕ್ರವಾರ ನಡೆದ ಕಾರ್ಯಕ್ರಮದಲ್ಲಿ 'ಪವರ್ ಆಫ್ ವೋಟ್ ಎಂಪವರಿಂಗ್ ಡೆಮಾಕ್ರಸಿ' ಸಿಡಿಗಳನ್ನು ಲೋಕಾಯುಕ್ತ ನ್ಯಾಯಮೂರ್ತಿ ಎನ್. ಸಂತೋಷ್ ಹೆಗ್ಡೆ ಬಿಡುಗಡೆ ಮಾಡಿದರು. ಶೇಷಾದ್ರಿಪುರ ಪದವಿ ಕಾಲೇಜಿನ ಪ್ರಾಂಶುಪಾಲ ಡಾ। ನರಹಳ್ಳಿ ಬಾಲಸುಬ್ರಹ್ಮಣ್ಯ, ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ವೂಡೆ ಪಿ. ಕೃಷ್ಣ, ಜಂಟಿ ಪೊಲೀಸ್ ಆಯುಕ್ತ ಗೋಪಾಲ್ ಬಿ. ಹೊಸೂರ್, ಅಕಾಡೆಮಿ ಫಾರ್ ಕ್ರಿಯೇಟಿವ್ ಟೀಚಿಂಗ್‌ನ ಅಧ್ಯಕ್ಷ ಡಾ। ಗುರುರಾಜ್ ಕರಜಗಿ ಉಪಸ್ಥಿತರಿದ್ದರು.

ಈ ಸಂಜೆ ಶುಕ್ರವಾರ, 02 ಮೇ, 2008

# ಯೋಗ್ಯರಿಗೆ ಮತ ಹಾಕಿ: ಲೋಕಾಯುಕ್ತ

ಬೆಂಗಳೂರು, ಮೇ 2- ಮಧ್ಯಮ ವರ್ಗ ಮತ್ತು ಯುವಜನತೆ ಮತ ಚಲಾಯಿಸುವುದರ ಮೂಲಕ ರಾಜಕೀಯ ಬದಲಾವಣೆ ತರಲು ಸಾಧ್ಯ ಎಂದು ಲೋಕಾಯುಕ್ತ ನ್ಯಾಯಮೂರ್ತಿ ಎನ್. ಸಂತೋಷ್ ಹೆಗಡೆ ಅಭಿಪ್ರಾಯಪಟ್ಟಿದ್ದಾರೆ.

ಇತ್ತೀಚಿನ ದಿನಗಳಲ್ಲಿ ಯುವಕರು ಮತ್ತು ಮಧ್ಯಮವರ್ಗದ ಜನತೆಗೆ ಚುನಾವಣೆಗಳೆಂದರೆ ಅಲಕ್ಷ್ಯ ಮನೋಭಾವನೆ ಮೂಡಿದೆ. ಇದಕ್ಕೆ ರಾಜಕಾರಣಿಗಳೇ ನೇರ ಕಾರಣ ಎಂದು ಹೇಳಿದ ಹೆಗಡೆ, ಮತ ಚಲಾಯಿಸುವುದರ ಮೂಲಕ ಬದಲಾವಣೆ ಮಾಡಬೇಕೆಂದು ಸಲಹೆ ಮಾಡಿದರು.

ಡ್ರೀಮ್ ಕ್ರಿಯೇಷನ್ ಮತ್ತು ಶೇಷಾದ್ರಿಪುರಂ ಶಿಕ್ಷಣ ಟ್ರಸ್ಟ್ ಹಮ್ಮಿಕೊಂಡಿದ್ದ ಮತದಾನದ ಕುರಿತು ಸಾರ್ವಜನಿಕ ತಿಳುವಳಿಕೆ ಸಿಡಿ ಮತ್ತು ವಿಸಿಡಿ ಬಿಡುಗಡೆ ಮಾಡಿ ಅವರು ಮಾತನಾಡಿದರು.

ಶೇ. 50ರಷ್ಟು ಜನರಿಗೆ ಚುನಾವಣೆಗಳೆಂದರೆ ಅಲರ್ಜಿ. ಅದರಲ್ಲೂ ವಿಶೇಷವಾಗಿ ಯುವಜನತೆ ಮತ್ತು ಮಧ್ಯಮವರ್ಗದವರು ಮತ ಚಲಾಯಿಸುವ ಗೋಜಿಗೆ ಹೋಗುವುದಿಲ್ಲ. ಇಂತಹ ಅಸಡ್ಡೆತನ ಬಿಟ್ಟು, ಸಂತೋಷ್ ಹೆಗಡೆ ಸಂವಿಧಾನ ನೀಡಿರುವ ಮತದಾನದ ಹಕ್ಕನ್ನು ಚಲಾಯಿಸಬೇಕೆಂದು ಹೇಳಿದರು.

ಚುನಾವಣೆಯಲ್ಲಿ ಎಷ್ಟೇ ಅಯೋಗ್ಯ ಅಭ್ಯರ್ಥಿಗಳು ಸ್ಪರ್ಧಿಸಿದ್ದರೂ, ಅದರಲ್ಲಿ ಕೆಲವರಾದರೂ ಯೋಗ್ಯ ಅಭ್ಯರ್ಥಿಗಳು ಇರುತ್ತಾರೆ. ಯುವಜನತೆ ಮತ್ತು ಮಧ್ಯಮವರ್ಗದವರು ಇಂತಹ ಯೋಗ್ಯ ಅಭ್ಯರ್ಥಿಗಳನ್ನೇ ಆಯ್ಕೆ ಮಾಡಬೇಕಾದ ಅಗತ್ಯವಿದೆ ಎಂದರು.

ಎಲ್ಲ ರಾಜಕೀಯ ಪಕ್ಷಗಳು ಮತದಾನಕ್ಕೂ ಮುನ್ನ ಬಿಡುಗಡೆ ಮಾಡುವ ಪ್ರಣಾಳಿಕೆಗಳು ಸಂಪೂರ್ಣ ಸುಳ್ಳು. ಜನರನ್ನು ಮೂರ್ಖರನ್ನಾಗಿಸಲು ಮಾಡುವ ಇದೊಂದು ತಂತ್ರ ಎಂದು ಹೆಗಡೆ ಕಿಡಿ ಕಾರಿದರು.

ಪ್ರಣಾಳಿಕೆಯಲ್ಲಿ ಈಡೇರಿಸಲಾಗದಂತಹ ಸುಳ್ಳು ಭರವಸೆಗಳನ್ನು ರಾಜಕಾರಣಿಗಳು ನೀಡಿರುತ್ತಾರೆ. ಆದ್ದರಿಂದ ಇಂತಹ ಸುಳ್ಳು ಹೇಳುವ ಅಯೋಗ್ಯರನ್ನು ಧಿಕ್ಕರಿಸಿ, ಯೋಗ್ಯರನ್ನು ಆಯ್ಕೆ ಮಾಡಿ ಎಂದು ಹೆಗಡೆ ಪುನರುಚ್ಚರಿಸಿದರು.

ನಗರ ಜಂಟಿ ಪೊಲೀಸ್ ಆಯುಕ್ತ ಗೋಪಾಲ್ ಬಿ ಹೋಸೂರ್ ಮಾತನಾಡಿ, ಯಾರು ಯೋಗ್ಯ ವ್ಯಕ್ತಿಗಳಿರುವರೋ ಅಂತಹವರನ್ನು ಆಯ್ಕೆ ಮಾಡಿ ಪ್ರಜಾಪ್ರಭುತ್ವದಲ್ಲಿ ನಿಮಗೆ ನಂಬಿಕೆ ಇದ್ದರೆ ತಪ್ಪದೇ ಮತ ಚಲಾಯಿಸಿ, ಯೋಗ್ಯ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ, ವಿಧಾನಸೌಧಕ್ಕೆ ಕಳುಹಿಸಿಕೊಡುವ ಜವಾಬ್ದಾರಿ ನಿಮ್ಮ ಮೇಲಿದೆ ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಡಾ. ಗುರುರಾಜ್ ಕರಜಗಿ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ , ಗಣಪತಿ ಭಟ್, ಬಾಲಸುಬ್ರಹ್ಮಣ್ಯ ಸೇರಿದಂತೆ ಮತ್ತಿತರರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಬೆಂಗಳೂರು ವಿಜಯ | ಬುಧವಾರ, 23 ಏಪ್ರಿಲ್ 2008



ಶೇಷಾದ್ರಿಪುರಂ ಕಾಲೇಜಿನ ವಾರ್ಷಿಕೋತ್ಸವದಲ್ಲಿ ಚಿತ್ರ ನಟಿ ಅಮೂಲ್ಯ ಅವರನ್ನು ಸನ್ಮಾನಿಸಲಾಯಿತು. ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಸಹ ಕಾರ್ಯದರ್ಶಿ ಶ್ರೀನಿವಾಸಯ್ಯ, ಡಾ. ರಮೇಶ್, ಪ್ರಾಂಶುಪಾಲ ನರಹಳ್ಳಿ ಬಾಲ ಸುಬ್ರಮಣ್ಯ ಹಾಜರಿದ್ದರು.

ಉದಯವಾಣಿ ಏಪ್ರಿಲ್ 22, 2008

# ಸನ್ಮಾನ



ಶೇಷಾದ್ರಿಪುರಂ ಕಾಲೇಜಿನ ವಾರ್ಷಿಕೋತ್ಸವ ಸಮಾರಂಭದಲ್ಲಿ ಚಿತ್ರನಟಿ ಅಮೂಲ್ಯ ಅವರನ್ನು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಸನ್ಮಾನಿಸಿದರು. ಡಾ। ಎಸ್. ರಮೇಶ್, ಸಂಸ್ಥೆಯ ಸಹ ಕಾರ್ಯದರ್ಶಿ ಎ. ಆರ್. ಶ್ರೀನಿವಾಸಯ್ಯ, ಟ್ರಸ್ಟಿ ಸರೋಜಾ ಕೆ.ಎಂ. ನಂಜಪ್ಪ, ಪ್ರಾಂಶುಪಾಲ ಡಾ। ನರಹಳ್ಳಿ ಬಾಲಸುಬ್ರಹ್ಮಣ್ಯ ಉಪಸ್ಥಿತರಿದ್ದರು.

ಸಂಜೆವಾಣಿ
ಸೋಮವಾರ 21 ಏಪ್ರಿಲ್ 2008




ನಗರದಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ, ಸಂತ ನಿರಂಕಾರಿ ಮಂಡಳ್‌ರವರ ಸಹಯೋಗದೊಂದಿಗೆ ಮಾನವ ಏಕ್ತಾ ದಿವಸ್ ಅಂಗವಾಗಿ ಹಮ್ಮಿಕೊಂಡಿದ್ದ ಸ್ವಯಂಪ್ರೇರಿತ ರಕ್ತದಾನ ಶಿಬಿರದಲ್ಲಿ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ರಾಜ್ಯ ಶಾಖೆಯ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಕೋಶಾಧ್ಯಕ್ಷ ರಾಜು, ಚಂದ್ರಶೇಖರ್, ಎಸ್.ಎಸ್. ಶರ್ಮ, ಡಾ. ನಾರಾಯಣಸ್ವಾಮಿ, ಡಾ. ಸುರೇಶ್ವರಯ್ಯ ಪಾಲ್ಗೊಂಡಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು
21-4-2008




ಸಂತ ನಿರಂಕಾರಿ ಮಂಡಳ್‌ರವರು ಮಾನವ ಏಕ್ತಾ ದಿವಸ್ ಅಂಗವಾಗಿ ಸ್ವಯಂಪ್ರೇರಿತ ರಕ್ತದಾನ ಶಿಬಿರ ಏರ್ಪಡಿಸಿದ್ದರು. ಈ ಸಂದರ್ಭದಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ರಾಜ್ಯ ಶಾಖೆ ಉಪಾಧ್ಯಕ್ಷ ಪ್ರೊ. ಪಿ. ಕೃಷ್ಣ ರಾಜು ಚಂದ್ರಶೇಖರ್, ಎಸ್.ಎಸ್. ಶರ್ಮ, ಡಾ. ನಾರಾಯಣಸ್ವಾಮಿ, ಡಾ. ಸುರೇಶ್ವರಯ್ಯ ಮತ್ತಿತರರು ಉಪಸ್ಥಿತರಿದ್ದರು.

ಉಪನಗರ

# ಹಕ್ಕು ಉಲ್ಲಂಘನೆ ನಿರಂತರ

**ವಿಕ ಸುದ್ದಿಲೋಕ**

ಯಲಹಂಕ : ಮಾನವ ಹಕ್ಕು ಉಲ್ಲಂಘನೆ ನಿರಂತರವಾಗಿ ಆಗುತ್ತಿದೆ ಎಂದು ರಾಜ್ಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷ ನ್ಯಾಯಮೂರ್ತಿ ಡಾ. ಎಸ್.ಆರ್. ನಾಯಕ್ ತಿಳಿಸಿದರು.

ಇಲ್ಲಿನ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ 'ಮಾನವ ಹಕ್ಕು ಹಾಗೂ ಯುವಕರ ಪಾತ್ರ'ದ ಬಗ್ಗೆ ಮಂಗಳವಾರ ಆಯೋಜಿಸಿದ್ದ ಕಾರ್ಯಾಗಾರದಲ್ಲಿ ಮಾತನಾಡಿದರು.

ಪ್ರಜ್ಞಾವಂತ ಹಾಗೂ ಆಸಕ್ತಿಯಿರುವ ಜನರಿಂದ ಮಾತ್ರ ಮಾನವ ಹಕ್ಕುಗಳನ್ನು ಸಂರಕ್ಷಿಸಲು ಸಾಧ್ಯ. ಈ ಹಿನ್ನೆಲೆಯಲ್ಲಿ ಮಾಹಿತಿ ಹಕ್ಕನ್ನು ದೊರಕುವಂತೆ ಮಾಡುವ ಕಾರ್ಯ ಸರಕಾರ ಹಾಗೂ ಜನಪ್ರತಿನಿಧಿಗಳಿಂದ ಆಗಬೇಕಾಗಿದೆ ಎಂದರು.

ಮಾಹಿತಿ ಸಂಗ್ರಹಣೆ, ಘಟನೆ, ದೂರುಗಳ ಬಗ್ಗೆ ತನಿಖೆ ನಡೆಸಿ ಅಗತ್ಯವಿರುವ ವಿಧಾನಕ್ಕೆ ತಕ್ಕಂತೆ ಪ್ರಾಮಾಣಿಕವಾಗಿ ತೀರ್ಪು ನೀಡುವುದು, ಕಾನೂನು ನೆರವು ನೀಡುವುದು, ತೀರ್ಪುಗಳ ಜಾರಿ ಹಾಗೂ ಪರಿಹಾರ ಕಾಣಿಸುವ ಕಾರ್ಯವಾಗದ ಹೊರತು ಮಾನವ ಹಕ್ಕುಗಳಿಗೆ ತನ್ನದೇ ಆದ ಹಕ್ಕು ಇರದು ಎಂದು ಪ್ರತಿಪಾದಿಸಿದರು.

ವಿವೇಕಯುಗ ಫೌಂಡೇಶನ್‌ನ ಅಧ್ಯಕ್ಷ ಡಿ.ಎಂ. ಹೆಗಡೆ ಪ್ರತಿಕ್ರಿಯಿಸಿ, ವಿದ್ಯಾರ್ಥಿಗಳು ಸಮಾಜದಲ್ಲಿ ಅನ್ಯಾಯವಾದಾಗ ಅವುಗಳ ವಿರುದ್ಧ ಹೋರಾಡುವ ಮನೋಭಾವ ಬೆಳೆಸಿಕೊಳ್ಳಬೇಕು ಎಂದು ಸಲಹೆ ಮಾಡಿದರು.

ಶೇಷಾದ್ರಿಪುರ. ಎಜುಕೇಷನ್ ಟ್ರಸ್ಟ್‌ನ ಕಾರ್ಯದರ್ಶಿ ವುಡೇ ಪಿ. ಕೃಷ್ಣ ಮಾತನಾಡಿ, ಶಾಂತಿ ಮತ್ತು ಅಹಿಂಸೆಯಿಂದ ಜನಜೀವನ ಸುಧಾರಣೆಯಾಗಲು ಸಾಧ್ಯ ಎಂದು ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಪ್ರಿನ್ಸಿಪಾಲ್ ಪ್ರಕಾಶ್ ಹಾಜರಿದ್ದರು.

ವಿಕ ಚಿತ್ರಲೋಕ



**ಯಲಹಂಕ ಉಪನಗರದಲ್ಲಿ 'ಮಾನವ ಹಕ್ಕು ಮತ್ತು ಯುವಕರ ಪಾತ್ರ' ಕುರಿತ ವಿಚಾರ ಸಂಕಿರಣ ನಡೆಯಿತು. ರಾಜ್ಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷ ಡಾ. ಎಸ್.ಆರ್. ನಾಯಕ್, ಕಾರ್ಯದರ್ಶಿ ವುಡೇ ಪಿ. ಕೃಷ್ಣ ಉಪಸ್ಥಿತರಿದ್ದರು.**

ಬೆಂಗಳೂರು ವಿಜಯ | ಗುರುವಾರ, 17 ಏಪ್ರಿಲ್ 2008

# ಆತ್ಮವಿಶ್ವಾಸದಿಂದ ಮುನ್ನುಗ್ಗಿ

**ಬೆಂಗಳೂರು:** ಆತ್ಮ ವಿಶ್ವಾಸದಿಂದ ಮುನ್ನುಗ್ಗುವ ಗುಣ ಬೆಳೆಸಿಕೊಳ್ಳಬೇಕೆಂದು ಹಿರಿಯ ಪೊಲೀಸ್ ಅಧಿಕಾರಿ ಡಾ. ಸುಭಾಷ್ ಭರಣಿ ಅಭಿಪ್ರಾಯಪಟ್ಟರು.

ಕೆಂಗೇರಿ ಉಪನಗರದಲ್ಲಿರುವ ಶೇಷಾದ್ರಿಪುರ ಅಕಾಡೆಮಿ ಆಫ್ ಬಿಸಿನೆಸ್ ಸ್ಟಡೀಸ್ ಕಾಲೇಜು ವಾರ್ಷಿಕ ಸಮಾರಂಭದಲ್ಲಿ ಅವರು ಮಾತನಾಡಿದರು.

ಯಾವುದೇ ಕ್ಷೇತ್ರವಿರಲಿ ಅಂಜದೇ ಆತ್ಮವಿಶ್ವಾಸದಿಂದ ಕಾರ್ಯ ನಿರ್ವಹಿಸಬೇಕು. ಆತ್ಮವಿಶ್ವಾಸ, ಮೇಧಾವಿತನ, ವಾಣಿಜ್ಯ ಕೌಶಲ್ಯ ಹಾಗೂ ಸೇವಾ ಮನೋಭಾವ ವ್ಯಕ್ತಿತ್ವವಿರುವ ಧೀರುಬಾಯಿ ಅಂಬಾನಿಯ ಬದುಕು ಅನುಕರಿಸಬೇಕೆಂದು ಕರೆ ನೀಡಿದರು.

ವಿದ್ಯಾರ್ಥಿಗಳು ತಮ್ಮಲ್ಲಿರುವ ಕೌಶಲ್ಯವನ್ನು ದುರುಪಯೋಗಪಡಿಸಿಕೊಳ್ಳದೇ ಸಮಾಜದ ಏಳಿಗೆಗಾಗಿ ಶ್ರಮಿಸಬೇಕು ಎಂದು ತಿಳಿಸಿದರು.




**ಕೆಂಗೇರಿ ಉಪನಗರದಲ್ಲಿರುವ ಶೇಷಾದ್ರಿಪುರಂ ಅಕಾಡೆಮಿ ಆಫ್ ಬಿಸಿನೆಸ್ ಸ್ಟಡೀಸ್ ಕಾಲೇಜು ವಾರ್ಷಿಕ ಸಮಾರಂಭದಲ್ಲಿ ಸರೋಜಾ ನಂಜಪ್ಪ ಡಾ. ಸುಭಾಷ್ ಭರಣಿ, ಡಬ್ಲ್ಯು.ಪಿ. ಕೃಷ್ಣ ಬಿ.ಎ. ಅನಂತರಾಮ್ ಉಪಸ್ಥಿತರಿದ್ದರು.**

ಪ್ರಜಾವಾಣಿ ಬುಧವಾರ 16ನೇ ಏಪ್ರಿಲ್ 2008



ಯಲಹಂಕದ ಶೇಷಾದ್ರಿಪುರಂ ಪ್ರಥಮದರ್ಜೆ ಕಾಲೇಜಿನಲ್ಲಿ ಮಂಗಳವಾರ ನಡೆದ 'ಮಾನವಹಕ್ಕು ಮತ್ತು ಯುವಕರ ಪಾತ್ರ' ಕುರಿತ ವಿಚಾರ ಸಂಕಿರಣದಲ್ಲಿ ರಾಜ್ಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷ ನ್ಯಾಯಮೂರ್ತಿ ಡಾ.ಎಸ್. ಆರ್.ನಾಯಕ್ ಅವರು ವಿದ್ಯಾರ್ಥಿಗಳ ಪ್ರಶ್ನೆಗಳಿಗೆ ಉತ್ತರ ನೀಡಿದರು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ವೂಡೆ.ಪಿ.ಕೃಷ್ಣ, ವಿವೇಕಯುಗ ಪ್ರತಿಷ್ಠಾನದ ಅಧ್ಯಕ್ಷ ಡಿ.ಎಂ.ಹೆಗ್ಡೆ ಚಿತ್ರದಲ್ಲಿದ್ದಾರೆ.

# 'ಶಿಕ್ಷಣ ಪಡೆದವರಲ್ಲೆ ಜಾತೀಯತೆ ಹೆಚ್ಚು'

**ಯಲಹಂಕ:** 'ಸಮಾನತೆ ಎಲ್ಲಿಯವರೆಗೆ ಬರುವುದಿಲ್ಲವೊ ಅಲ್ಲಿಯವರೆಗೆ ಮಾನವ ಹಕ್ಕುಗಳ ಉಲ್ಲಂಘನೆ ನಡೆಯುತ್ತಿರುತ್ತದೆ' ಎಂದು ರಾಜ್ಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷ ನ್ಯಾಯಮೂರ್ತಿ ಡಾ.ಎಸ್. ಆರ್.ನಾಯಕ್ ಹೇಳಿದರು.

ವಿವೇಕಯುಗ ಪ್ರತಿಷ್ಠಾನದ ಆಶ್ರಯದಲ್ಲಿ ಇಲ್ಲಿನ ಶೇಷಾದ್ರಿಪುರಂ ಪ್ರಥಮದರ್ಜೆ ಕಾಲೇಜಿನಲ್ಲಿ ಆಯೋಜಿಸಿದ್ದ 'ಮಾನವಹಕ್ಕು ಮತ್ತು ಯುವಕರ ಪಾತ್ರ' ಕುರಿತ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾತನಾಡಿದ ಅವರು, ಮಾನವೀಯ ಮೌಲ್ಯಗಳಿಂದ ಮಾತ್ರ ಸುಂದರ ಸಮಾಜ ನಿರ್ಮಾಣ ಮಾಡಲು ಸಾಧ್ಯ ಎಂದರು.

ಹೆಚ್ಚಿನ ಶಿಕ್ಷಣ ಪಡೆದವರಲ್ಲೆ ಜಾತೀಯತೆ ಹೆಚ್ಚಾಗಿದ್ದು, ಇದನ್ನು ಅಳಿಸಿ ಮಾನವೀಯತೆಯ ಬಗ್ಗೆ ಮಾತನಾಡಬೇಕಾದರೆ ಮೊದಲು ನಮ್ಮ ಆತ್ಮವನ್ನು ಶುದ್ಧ ಮಾಡಿಕೊಳ್ಳಬೇಕಾಗಿದೆ ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ವೂಡೆ.ಪಿ. ಕೃಷ್ಣ ಮಾತನಾಡಿ, ಶಾಂತಿ ಮತ್ತು ಅಹಿಂಸೆಯ ಕಡೆಗೆ ನಾವು ಹೆಚ್ಚಿನ ಗಮನ ಹರಿಸಿದಾಗ ನಮ್ಮ ಜನಜೀವನ ಸುಧಾರಣೆಯಾಗುತ್ತದೆ ಎಂದು ಸಲಹೆ ನೀಡಿದರು.

ವಿವೇಕಯುಗ ಪ್ರತಿಷ್ಠಾನದ ಅಧ್ಯಕ್ಷ ಡಿ.ಎಂ.ಹೆಗ್ಡೆ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಜಂಟಿ ಕಾರ್ಯದರ್ಶಿ ಎ. ಆರ್.ಶ್ರೀನಿವಾಸಯ್ಯ, ಪ್ರಾಂಶುಪಾಲ ಡಾ.ಎಂ.ಪ್ರಕಾಶ್ ಉಪಸ್ಥಿತರಿದ್ದರು.

ಈ ಸಂಜೆ ಮಂಗಳವಾರ 15 ಏಪ್ರಿಲ್ 2008



ಶೇಷಾದ್ರಿಪುರಂ ಕಾಲೇಜು ವಾರ್ಷಿಕೋತ್ಸವದಲ್ಲಿ ಯುವ ನಟಿ ಅಮೂಲ್ಯರನ್ನು ಸಂಸ್ಥೆ ಕಾರ್ಯದರ್ಶಿ ವೂಡೇ.ಪಿ.ಕೃಷ್ಣ ಸನ್ಮಾನಿಸಿದರು. ಮೌಂಟ್ ಕಾರ್ಮೆಲ್ ಕಾಲೇಜಿನ ಡಾ.ಎಸ್. ರಮೇಶ್, ಸಹಕಾರ್ಯದರ್ಶಿ ಎ.ಆರ್.ಶ್ರೀನಿವಾಸಯ್ಯ, ಸರೋಜಾ ಕೆ.ಎಂ.ನಂಜಪ್ಪ ಇದ್ದರು.

ಕರುನಾಡ ಸಂಜೆ ಮಂಗಳವಾರ 15.04.2008




ಸಮಾಜ ಸೇವಕ ಕೃಷ್ಣ ದಂಪತಿಗಳಿಗೆ ಬೆಂಗಳೂರಿನಲ್ಲಿ ಸಹೇಲಿ ಸಂಸ್ಥೆಯಿಂದ ಹಮ್ಮಿಕೊಳ್ಳಲಾಗಿದ್ದ ಸಮಾರಂಭದಲ್ಲಿ ನಿವೃತ್ತ ಲೋಕಾಯುಕ್ತ ನ್ಯಾಯಮೂರ್ತಿ ವೆಂಕಟಾಚಲ ಅವರು ಸನ್ಮಾನಿಸಿದರು.

ಕನ್ನಡಪ್ರಭ, ಬೆಂಗಳೂರು ಸೋಮವಾರ, 14 ಏಪ್ರಿಲ್ 2008



## ಅಮೂಲ್ಯಗೆ ಸನ್ಮಾನ

ಶೇಷಾದ್ರಿಪುರ ಕಾಲೇಜಿನ ವಾರ್ಷಿಕೋತ್ಸವದಲ್ಲಿ ಚಿತ್ರನಟಿ ಅಮೂಲ್ಯ ಅವರನ್ನು ಸನ್ಮಾನಿಸಲಾಯಿತು. ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೇ ಪಿ.ಕೃಷ್ಣ, ಮೌಂಟ್ ಕಾರ್ಮೆಲ್ ಕಾಲೇಜಿನ ಡೀನ್ ಡಾ. ರಮೇಶ್, ಶ್ರೀನಿವಾಸಯ್ಯ, ಸರೋಜಾ, ಡಾ.ನರಹಳ್ಳಿ ಇದ್ದರು.

# ಉದಯವಾಣಿ

## ಸೋಮವಾರ 14 ಏಪ್ರಿಲ್ 2008



ಬೆಂಗಳೂರಿನಲ್ಲಿ ವಿಶ್ವ ಆರೋಗ್ಯದಿನಾಚರಣೆ ಅಂಗವಾಗಿ ಆಯೋಜಿಸಿದ್ದ ರಕ್ತದಾನ ಶಿಬಿರವನ್ನು ಸುಮಾನಂದ ಸರಸ್ವತಿ ಸ್ವಾಮೀಜಿ ಉದ್ಘಾಟಿಸಿದರು. ಮಾಜಿ ಸಚಿವೆ ರಾಣಿ ಸತೀಶ್, ಮಾಜಿ ಶಾಸಕ ಐವಾನ್ ನಿಗ್ಲಿ, ವಿದುಷಿ ಶ್ಯಾಮಲಾ ಜಿ.ಭಾವೆ ಉಪಸ್ಥಿತರಿದ್ದರು.

ಪ್ರಜಾವಾಣಿ
ಭಾನುವಾರ 13ನೇ ಏಪ್ರಿಲ್ 2008




ಇತ್ತೀಚೆಗೆ ಕೆಂಗೇರಿ ಉಪನಗರದ ಶೇಷಾದ್ರಿಪುರ ಅಕಾಡೆಮಿ ಆಫ್ ಬ್ಯುಸಿನೆಸ್ ಸ್ಟಡೀಸ್ ಸಂಸ್ಥೆಯಲ್ಲಿ ನಡೆದ ವಾರ್ಷಿಕೋತ್ಸವ ಸಮಾರಂಭದಲ್ಲಿ ಕಾಲೇಜಿನ ಪ್ರಾಂಶುಪಾಲ ಪ್ರೊ.ಜಿ. ರಾಧಾಕೃಷ್ಣ, ಶೇಷಾದ್ರಿಪುರ ಶಿಕ್ಷಣ ದತ್ತಿಯ ಸದಸ್ಯರಾದ ಸರೋಜಾ ನಂಜಪ್ಪ, ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕ ಡಾ. ಸುಭಾಷ್ ಭರಣಿ, ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಮತ್ತು ಆಡಳಿತ ಮಂಡಳಿ ಸದಸ್ಯ ಬಿ.ಎ. ಅನಂತರಾಂ ಪಾಲ್ಗೊಂಡಿದ್ದರು.

# ಪ್ರಜಾವಾಣಿ

ಭಾನುವಾರ 13ನೇ ಏಪ್ರಿಲ್ 2008



ಶೇಷಾದ್ರಿಪುರ ಕಾಲೇಜಿನ ಇತ್ತೀಚೆಗೆ ನಡೆದ ವಾರ್ಷಿಕೋತ್ಸವದಲ್ಲಿ ಉದಯೋನ್ಮುಖ ಚಲನಚಿತ್ರ ಕಲಾವಿದೆ ಅಮೂಲ್ಯರನ್ನು ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಸನ್ಮಾನಿಸಿದರು. ಮೌಂಟ್ ಕಾರ್ಮೆಲ್ ಕಾಲೇಜಿನ ಡೀನ್ ಡಾ. ಎಸ್.ರಮೇಶ್, ಸಂಸ್ಥೆಯ ಸಹಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಟ್ರಸ್ಟಿ ಸರೋಜಾ ಕೆ.ಎಂ. ನಂಜಪ್ಪ ಹಾಗೂ ಪ್ರಾಂಶುಪಾಲ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ಹಾಜರಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

13-4-2008



ಬೆಂಗಳೂರಿನ ಶೇಷಾದ್ರಿಪುರ ಕಾಲೇಜಿನ ವಾರ್ಷಿಕೋತ್ಸವ ಸಮಾರಂಭದಲ್ಲಿ ಉದಯೋನ್ಮುಖ ತಾರೆ ಅಮೂಲ್ಯ ಅವರನ್ನು ಸನ್ಮಾನಿಸಲಾಯಿತು. ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೇ ಸಿ.ಕೃಷ್ಣ ಸನ್ಮಾನಿಸಿದರು. ಮೌಂಟ್‌ಕಾರ್ಮೆಲ್ ಕಾಲೇಜಿನ ಡೀನ್ ಡಾ.ಎಸ್.ರಮೇಶ್, ಸಂಸ್ಥೆಯ ಸಹ ಕಾರ್ಯದರ್ಶಿ ಎ.ಆರ್.ಶ್ರೀನಿವಾಸಯ್ಯ, ಟ್ರಸ್ಟಿ ಸರೋಜ ಕೆ.ಎಂ.ನಂಜಪ್ಪ ಹಾಗೂ ಪ್ರಾಂಶುಪಾಲ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ಉಪಸ್ಥಿತರಿದ್ದರು.



ಬುಧವಾರ 9 ಏಪ್ರಿಲ್ 2008



ಇತ್ತೀಚೆಗೆ ನಗರದ ಶೇಷಾದ್ರಿಪುರಂ ಕಾನೂನು ಕಾಲೇಜಿನಲ್ಲಿ ನಡೆದ ವಾರ್ಷಿಕೋತ್ಸವ ಸಮಾರಂಭದಲ್ಲಿ ಬಿ.ಎಂ.ಟಿ.ಸಿ.ಯ ನಿಷ್ಠಾವಂತ ಚಾಲಕ ವೆಂಕಟಸ್ವಾಮಿಯವರನ್ನು ಹೈಕೋರ್ಟಿನ ನ್ಯಾ. ಹೆಚ್. ನಾಗಮೋಹನ್ ದಾಸ್‌ರವರು ಸನ್ಮಾನಿಸಿದರು. ಹಿರಿಯ ವಕೀಲೆ ಟಿ.ಎನ್. ಮಂಜುಳಾದೇವಿ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಟ್ರಸ್ಟಿ ಕೆ. ಕೃಷ್ಣಸ್ವಾಮಿ.

ಬೆಂಗಳೂರು ವಿಜಯ | ಬುಧವಾರ, 9 ಏಪ್ರಿಲ್ 2008



ಶೇಷಾದ್ರಿಪುರದ ಕಾನೂನು ಕಾಲೇಜಿನ ವಾರ್ಷಿಕೋತ್ಸವ ಸಮಾರಂಭದಲ್ಲಿ ಬಿಎಂಟಿಸಿ ಚಾಲಕ ವೆಂಕಟಸ್ವಾಮಿ ಅವರನ್ನು ಹೈಕೋರ್ಟ್‌ನ ನ್ಯಾ. ಎಚ್.ಎನ್. ನಾಗಮೋಹನ್ ದಾಸ್ ಸನ್ಮಾನಿಸಿದರು. ಹಿರಿಯ ನ್ಯಾಯವಾದಿ ಟಿ.ಎನ್. ಮಂಜುಳಾ ದೇವಿ, ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ವೂಡೆ ಪಿ. ಕೃಷ್ಣ, ಟ್ರಸ್ಟ್‌ನ ಕೆ. ಕೃಷ್ಣಸ್ವಾಮಿ ಭಾಗವಹಿಸಿದ್ದರು.

ಈ ಸಂಜೆ

ಮಂಗಳವಾರ 08 ಏಪ್ರಿಲ್ 2008



ಶೇಷಾದ್ರಿಪುರಂ ಕಾಲೇಜು ವಾರ್ಷಿಕೋತ್ಸವದಲ್ಲಿ ಬಿಎಂಟಿಸಿ ಚಾಲಕ ವೆಂಕಟಸ್ವಾಮಿ ಅವರನ್ನು ನ್ಯಾಯಮೂರ್ತಿ ಎಚ್.ಎನ್.ನಾಗಮೋಹನ ದಾಸ್ ಸನ್ಮಾನಿಸಿದರು. ವೂಡೇ.ಪಿ.ಕೃಷ್ಣ ಮತ್ತಿತರರು ಹಾಜರಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

6-4-2008



ಬೆಂಗಳೂರು ಶೇಷಾದ್ರಿಪುರಂ ಕಾನೂನು ಕಾಲೇಜಿನ ವಾರ್ಷಿಕೋತ್ಸವ ಸಂದರ್ಭದಲ್ಲಿ ಬಿಎಂಟಿಸಿಯ ನಿಷ್ಠಾವಂತ ಚಾಲಕ ವೆಂಕಟಸ್ವಾಮಿಯನ್ನು ಹೈಕೋರ್ಟ್ ನ್ಯಾಯಮೂರ್ತಿ ಹೆಚ್.ಎನ್. ನಾಗಮೋಹನದಾಸ್ ಸನ್ಮಾನಿಸಿದರು. ಈ ಸಂದರ್ಭದಲ್ಲಿ ಹಿರಿಯ ವಕೀಲೆ ಟಿ.ಎನ್. ಮಂಜುಳಾ ದೇವಿ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಗೌರವ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಟ್ರಸ್ಟಿ ಕೆ. ಕೃಷ್ಣಸ್ವಾಮಿ ಉಪಸ್ಥಿತರಿದ್ದರು.

ಬೆಂಗಳೂರು ವಿಜಯ | ಬುಧವಾರ, 7 ಮೇ 2008



ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಸಂತ ನಿರಂಕಾರಿ ಮಂಡಳ್ ಸಹಯೋಗದೊಂದಿಗೆ ಮಾನವ ಏಕ್ತಾ ದಿವಸ್ ಅಂಗವಾಗಿ ರಕ್ತದಾನ ಶಿಬಿರವನ್ನು ಹಮ್ಮಿಕೊಂಡಿತ್ತು. ವೂಡೇ ಪಿ. ಕೃಷ್ಣ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಶರ್ಮಾ, ಡಾ. ನಾರಾಯಣ ಸ್ವಾಮಿ, ಡಾ. ಸುರೇಶ್ವರಯ್ಯ ಹಾಜರಿದ್ದರು.




ಬುಧವಾರ 7 ಮೇ 2008

# ರೆಡ್‌ಕ್ರಾಸ್ ದಿನಾಚರಣೆ

ಬೆಂಗಳೂರು, ಮೇ ೭- ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಆಶ್ರಯದ "ವಿಶ್ವ ರೆಡ್‌ಕ್ರಾಸ್ ದಿನಾಚರಣೆ" ಕಾರ್ಯಕ್ರಮ ನಾಳೆ ಸಂಜೆ 4ಕ್ಕೆ ರಾಜ ಭವನ್ ರಸ್ತೆಯ "ದಿ ಕ್ಯಾಪಿಟಲ್" ಹೋಟೆಲ್‌ನಲ್ಲಿ ನಡೆಯಲಿದೆ.

ಬೆಂ.ವಿವಿ ಕುಲಪತಿ ಡಾ. ಹೆಚ್.ಎ. ರಂಗನಾಥ್ ಈ ಕಾರ್ಯಕ್ರಮವನ್ನು ಉದ್ಘಾಟಿಸಲಿದ್ದು, ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಉಪಾಧ್ಯಕ್ಷ ವೊಡೇ ಪಿ. ಕೃಷ್ಣ ಅಧ್ಯಕ್ಷತೆ ವಹಿಸಲಿದ್ದಾರೆ.

ಲೋಕಾಯುಕ್ತ ನ್ಯಾ.ಎನ್. ಸಂತೋಷ್ ಹೆಗ್ಡೆ ಮುಖ್ಯ ಅತಿಥಿಗಳಾಗಿ ಕಾರ್ಯಕ್ರಮದಲ್ಲಿ ಭಾಗವಹಿಸಲಿದ್ದಾರೆ.

ಕನ್ನಡಪ್ರಭ, ಭಾನುವಾರ, 6 ಏಪ್ರಿಲ್ 2008



## ಸನ್ಮಾನ

ಬಿಎಂಟಿಸಿಯಲ್ಲಿ ಅತ್ಯುತ್ತಮ ಸೇವೆ ಸಲ್ಲಿಸಿದ ಚಾಲಕ ವೆಂಕಟಸ್ವಾಮಿ ಅವರನ್ನು ಶೇಷಾದ್ರಿಪುರ ಕಾನೂನು ಕಾಲೇಜು ವಾರ್ಷಿಕೋತ್ಸವದಲ್ಲಿ ನ್ಯಾ/ಎಚ್.ಎಸ್. ನಾಗಮೋಹನ್ ದಾಸ್ ಸನ್ಮಾನಿಸಿದರು. ಟಿ.ಎನ್. ಮಂಜುಳಾದೇವಿ, ಪ್ರೊ. ಪಿ.ಕೃಷ್ಣ, ಕೆ.ಕೃಷ್ಣಸ್ವಾಮಿ ಮತ್ತು ಎ.ಜಿ. ಆಶಾ ಇದ್ದರು.

ಪ್ರಜಾವಾಣಿ

ಭಾನುವಾರ
6ನೇ ಏಪ್ರಿಲ್ 2008

B 3A



## ಸನ್ಮಾನ

ಶೇಷಾದ್ರಿಪುರದ ಕಾನೂನು ಕಾಲೇಜಿನ ವಾರ್ಷಿಕೋತ್ಸವ ಸಮಾರಂಭದಲ್ಲಿ ಬಿಎಂಟಿಸಿ ಚಾಲಕ ವೆಂಕಟಸ್ವಾಮಿ ಅವರನ್ನು ಹೈಕೋರ್ಟ್ ನ್ಯಾಯಮೂರ್ತಿ ಎಚ್. ಎನ್. ನಾಗಮೋಹನ್‌ದಾಸ್ ಸನ್ಮಾನಿಸಿದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

3-4-2008



ಬೆಂಗಳೂರಿನ ಶೇಷಾದ್ರಿಪುರ ಕಾಲೇಜಿನ ವಾರ್ಷಿಕೋತ್ಸವ ಸಮಾರಂಭದಲ್ಲಿ ಉದಯೋನ್ಮುಖ ತಾರೆ ಅಮೂಲ್ಯ ಅವರನ್ನು ಸನ್ಮಾನಿಸಲಾಯಿತು. ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಸನ್ಮಾನಿಸಿದರು. ಮೌಂಟ್‌ಕಾರ್ಮೆಲ್ ಕಾಲೇಜಿನ ಡೀನ್ ಡಾ.ಎಸ್.ರಮೇಶ್, ಸಂಸ್ಥೆಯ ಸಹ ಕಾರ್ಯದರ್ಶಿ ಎ.ಆರ್.ಶ್ರೀನಿವಾಸಯ್ಯ, ಟ್ರಸ್ಟಿ ಸರೋಜ, ಕೆ.ಎಂ.ನಂಜಪ್ಪ ಹಾಗೂ ಪ್ರಾಂಶುಪಾಲ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ಉಪಸ್ಥಿತರಿದ್ದರು.

ಬೆಂಗಳೂರು ಇತಿಹಾಸ ಮಾಲೆ

# ವಿಶಿಷ್ಟ ಮಹೋತ್ಸವ

ಸುರೇಶ್ ಮೂನ

ಶೇಷಾದ್ರಿಪುರಂ ರಾಮ ಸೇವಾಸಮಿತಿಯ ರಾಮೋತ್ಸವಕ್ಕೆ ಕಳೆದ ನಾಲ್ಕೈದು ದಶಕಗಳಿಂದಲೂ ಪ್ರತಿವರ್ಷವೂ ತಪ್ಪದೇ ಬರುತ್ತಿರುವ ಹಲವಾರು ಹಿರಿಯ ಸಂಗೀತ ಪ್ರೇಮಿಗಳ ಒಟ್ಟಾರೆ ಅಭಿಪ್ರಾಯವಿಷ್ಟು. ಎಲ್ಲರಿಗೂ ಮನೆಯಲ್ಲೇ ಹಬ್ಬ ಮಾಡಿದ ಸಂಭ್ರಮ. ಸಂಗೀತೋತ್ಸವ ಪ್ರಾರಂಭವಾಯಿತೆಂದರೆ ಮೂರುವಾರಗಳ ಕಾಲ ಇಲ್ಲಿಗೆ ಬರುತ್ತಿದ್ದವರ ಮನೆಗಳಲ್ಲಿಸಂಜೆಯ ಕಾರ್ಯಕ್ರಮಗಳೆಲ್ಲಾ ಸ್ಥಗಿತ. ಮದುವೆಗೋ ಊರಿಗೋ ಹೋಗುವಂತೆ ಇಡೀ ಕುಟುಂಬವೇ ಇದಕ್ಕಾಗಿ ಹೊರಟುಬಿಡುತ್ತಿತ್ತು. ಮಕ್ಕಳು ಹಿರಿಯರ ಜೊತೆ ಇಲ್ಲಿಗೆ ಬಂದು ಬಿಡುತ್ತಿದ್ದರು. ಈಗ ಕ್ರಿಕೆಟ್ ಹಾಗೂ ಸಿನಿಮಾ ನಟ-ನಟಿಯರ ಬಗ್ಗೆ ಆಸಕ್ತಿ ಇರುವಂತೆ ಆಗ ಇಲ್ಲಿಗೆ ಬರುವ ಸಂಗೀತಗಾರರ ಬಗ್ಗೆ ಕುತೂಹಲವಿರುತ್ತಿತ್ತು. ಬೇಗ ಬಂದು ವೇದಿಕೆಗೆ ಆದಷ್ಟು ಹತ್ತಿರ ಕುಳಿತು, ಅವರ ಹಾಡುಗಾರಿಕೆ ಹಾವ-ಭಾವ ಪಕ್ಕ ವಾದ್ಯದವರ ಪ್ರತಿಕ್ರಿಯೆಗಳು ಇವನ್ನೆಲ್ಲಾ ಕಣ್ಣಾರೆ ಕಾಣುವ ಬಯಕೆ. ಎಂ.ಎಲ್ ವಸಂತಕುಮಾರಿ, ಎಂ.ಎಸ್.ಸುಬ್ಬಲಕ್ಷ್ಮೀ, ಟಿ.ಆರ್. ಮಹಾಲಿಂಗಂ, ಟಿ.ಚೌಡಯ್ಯ ಮುಂತಾದ ಮಹಾನ್ ಕಲಾವಿದರನ್ನು ವೇದಿಕೆಯ ಬಳಿ ಹೋಗಿ ಮಾತಾಡಿಸಿದೆ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದುದುಂಟು.

ಜಯನಗರ, ಬಸವನಗುಡಿ, ರಾಜಾಜಿನಗರ ಮುಂತಾದ ದೂರಪ್ರದೇಶಗಳಿಂದ ಪ್ರಯಾಸ ಪಟ್ಟು ಬಂದರೂ ಇಲ್ಲಿ ಮಹಾನ್ ಕಲಾವಿದರ ದರ್ಶನ, ಅವರ ಸಂಗೀತದ ಆಸ್ವಾದನೆಯ ಮುಂದೆ ಗೌಣವಾಗಿಬಿಡುತ್ತಿತ್ತು. ಆಗಿನ ಪ್ರಮಾಣದಲ್ಲಿಲ್ಲದಿದ್ದರೂ ಈಗಲೂ ಅನೇಕ ಕುಟುಂಬಗಳಿಂದ ಹಿರಿಯರು, ಕಿರಿಯರೆಲ್ಲರೂ ಒಟ್ಟಾಗಿ ಇಲ್ಲಿಗೆ ಬರುತ್ತಿದ್ದಾರೆ. 'ಶೇಷಾದ್ರಿಪುರ ಮತ್ತು ಚಾಮರಾಜಪೇಟೆ ಕೋಟೆಶಾಲೆ ಮೈದಾನದ ರಾಮೋತ್ಸವಗಳು ನಮಗೆ ಶಾಸ್ತ್ರೀಯ ಸಂಗೀತದ ಸುಗ್ಗಿಯ ಕಾಲದಂತಿತ್ತು. ಎರಡೂ ಕಡೆಯ ಕಾರ್ಯಕ್ರಮಗಳ ಪಟ್ಟಿಯನ್ನಿಟ್ಟುಕೊಂಡು ಯಾವ ದಿನ ಯಾವ ಕಛೇರಿಗೆ ಹೋಗಬೇಕೆಂದು ಆಯ್ಕೆ ಮಾಡಿಕೊಳ್ಳುತ್ತಿದ್ದೆವು' ಎನ್ನುತ್ತಾರೆ ಹಿರಿಯ ಪತ್ರಕರ್ತ ಎಂ.ಜಯರಾಮ್ ಅಡಿಗರವರು.

ಸಂಗೀತ ಮತ್ತು ವಿದ್ಯೆ ಈ ಎರಡೂ ಕ್ಷೇತ್ರಗಳ ಅಧಿದೇವತೆ ಶಾರದೆ-ಸರಸ್ವತಿ. ಈ ಎರಡೂ ವಿಷಯಗಳಿಗಾಗಿ ಪ್ರತ್ಯೇಕ ಸಂಸ್ಥೆಗಳಿದ್ದು ತನ್ಮೂಲಕ ಈ ದೇವತೆಯ ಆರಾಧನೆ ನಡೆಯುವುದು ಸರ್ವ ಸಾಮಾನ್ಯ ಸಂಗತಿ. ಆದರೆ ಸಂಗೀತ ಮತ್ತು ಶಿಕ್ಷಣ ಎರಡೂ ಒಂದೇ ಸೂರಿನಡಿಯಲ್ಲಿ ನಡೆಯುವುದು ಅತ್ಯಂತ ಅಪರೂಪವೇ. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಒಂದು ಅಪರೂಪದ ಕೇಂದ್ರ. ಇದರ ಪ್ರಸ್ತುತ ಕಾರ್ಯದರ್ಶಿಗಳಾಗಿರುವ ವೂಡೆ. ಪಿ. ಕೃಷ್ಣರವರು ಈ ಮಧುರ ಬಾಂಧವ್ಯದ ಬಗ್ಗೆ ಈ ರೀತಿ ತಿಳಿಸುತ್ತಾರೆ, 'ನಮ್ಮ ಸಂಸ್ಥೆ ಮತ್ತು ರಾಮೋತ್ಸವ ಸಮಿತಿ ಒಂದೇ ನಾಣ್ಯದ ಎರಡು ಮುಖಗಳಿದ್ದ ಹಾಗೆ. ಇಲ್ಲಿನ ಆಡಳಿತ ಮಂಡಳಿಯಲ್ಲಿದ್ದವರೇ ಅದರ ಪದಾಧಿಕಾರಿಗಳಾಗುತ್ತಿರುವುದು ಮೂಲಕಾರಣ. ಹೀಗಾಗಿ 1950 ರ ದಶಕದಿಂದಲೂ ಸಮಿತಿಯ ರಾಮೋತ್ಸವ ನಡೆಯುವುದು ನಮ್ಮ ಸಂಸ್ಥೆಯ ಆವರಣದಲ್ಲೇ. ನಾವೂ ಇದು ಸಂಸ್ಥೆಯ ಕಾರ್ಯಕ್ರಮವೆಂದೇ ಎಲ್ಲಾ ವ್ಯವಸ್ಥೆಗಳನ್ನು ಮಾಡುತ್ತೇವೆ. 70ರ ದಶಕದಲ್ಲಿ ಉತ್ತಮವಾದ ವೇದಿಕೆಯುಳ್ಳ ಕುವೆಂಪು ಬಯಲು ರಂಗಮಂದಿರವನ್ನು ನಿರ್ಮಿಸಿದೆವು. ಈಗಲೂ ಹಾಗೆಯೇ. ಹಿರಿಯ ವಯಸ್ಸಾದವರಿಗೆಂದು ಸ್ವಲ್ಪ ಕುರ್ಚಿಗಳಿರುತ್ತವೆ. ಮಿಕ್ಕವರೆಲ್ಲ ಯಾವ ಭೇದ-ಭಾವವಿಲ್ಲದೇ ನೆಲದ ಮೇಲೆ ಕುಳಿತು ಸಂಗೀತವನ್ನು ಆಲಿಸುತ್ತಾರೆ. ಎಸ್.ಎಂ.ಕೃಷ್ಣರವರು ಮುಖ್ಯಮಂತ್ರಿಗಳಾಗಿದ್ದಾಗ ಕಾರ್ಯನಿಮಿತ್ತ ಅವರನ್ನು ಕಾಣಬೇಕಾಯಿತು. ನಾನು ಈ ಸಂಸ್ಥೆಯವನೆಂದು ತಿಳಿದಕೂಡಲೇ ಅವರು 70ರ ದಶಕದಲ್ಲಿ ತಾವಿದ್ದ ಪಕ್ಕದ ಕುಮಾರ ಪಾರ್ಕ್ ಬಡಾವಣೆಯಿಂದ ನಡೆದು ಬಂದು ನೆಲದ ಮೇಲೆ ಕುಳಿತು ಸಂಗೀತವನ್ನಾಲಿಸುತ್ತಿದ್ದರೆಂದು ಹೇಳಿದರು.

ಅಲ್ಲಿನ ಭಕ್ತಿ-ಭಾವ ತುಂಬಿದ ವಾತಾವರಣ, ಸಂಗೀತಗಾರರು ನೀಡುತ್ತಿದ್ದ ಅತ್ಯುತ್ತಮ ಕಛೇರಿಗಳನ್ನು ನಾನು ಮರೆಯಲು ಸಾಧ್ಯವೇ ಇಲ್ಲ ಎಂದು ಹೇಳಿದ್ದನ್ನು ವೂಡೆ.ಪಿ.ಕೃಷ್ಣ ಸ್ಮರಿಸಿಕೊಳ್ಳುತ್ತಾರೆ. ಹೀಗೆ ರಾಮೋತ್ಸವ ನಮ್ಮ ಸಂಸ್ಥೆಯ ಒಂದು ಯೋಜನೆಯಾಗಿ ಹೋಗಿದೆ. ನಮ್ಮ ಶಾಲಾ ಕಾಲೇಜುಗಳಿಗೆ ಮಕ್ಕಳನ್ನು ಸೇರಿಸುವ ಪೋಷಕರಲ್ಲನೇಕರು ಸಂಗೀತ ಪ್ರಿಯರೇ. ಹೀಗೆ ಐದು ದಶಕಗಳಿಗೂ ಹಿಂದಿನಿಂದ ಒಂದೇ ಸೂರಿನಡಿ ಪೋಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಈ ರೀತಿಯ ಸೌಲಭ್ಯವನ್ನೊದಗಿಸುತ್ತಿರುವುದು ನಮ್ಮ ನಾಡಿನಲ್ಲಿಯೇ ಅಪರೂಪವೆನ್ನಬಹುದು ಎನ್ನುತ್ತಾರೆ ವೂಡೆ.ಪಿ.ಕೃಷ್ಣರವರು.

ಈ ಬಾಂಧವ್ಯದಿಂದಾಗಿಯೇ 6ನೇ ಶೇಷಾದ್ರಿಪುರಂ ಕಾಲೇಜಿನ ರಜತ ಮಹೋತ್ಸವ ಮತ್ತು ರಾಮೋತ್ಸವ ಸಮಿತಿಯ ಸುವರ್ಣ ಮಹೋತ್ಸವವನ್ನು ಒಟ್ಟಿಗೆ ಆಚರಿಸುವುದು. ಆ ಕುರಿತು ಕಾರ್ಯದರ್ಶಿ ಪ್ರೊ। ಎಚ್.ಬಿ.ಪಿ.ವೆಂಕಟೇಶ್ ಹೀಗೆ ತಿಳಿಸುತ್ತಾರೆ.

1998ರ ವೇಳೆಗೆ ನಮ್ಮ ಕಾಲೇಜು ಪ್ರಾರಂಭಗೊಂಡು 25 ವರ್ಷಗಳಾಗಿದ್ದವು. ಅದೇ ವರ್ಷವೇ ರಾಮೋತ್ಸವ ಸಮಿತಿಯ 50 ವರ್ಷಗಳನ್ನು ಪೂರ್ಣಗೊಳಿಸಿತು. ಕಾಲೇಜಿನ ರಜತಮಹೋತ್ಸವ ಹಾಗೂ ಸಮಿತಿಯ ಸುವರ್ಣಮಹೋತ್ಸವವನ್ನು ಒಟ್ಟಿಗೆ ಏಪ್ರಿಲ್‌ನಲ್ಲಿ ಆಚರಿಸಿದರೆ ಪರಸ್ಪರ ನೆರವು ಸಿಕ್ಕಿದಂತಾಗುತ್ತದೆ. ಹೆಚ್ಚು ವೈವಿಧ್ಯಮಯ ಕಾರ್ಯಕ್ರಮಗಳನ್ನು ಜನರಿಗೆ ನೀಡಿದಂತಾಗುತ್ತದೆ ಎಂದು ಯೋಚಿಸಿ ಅದರಂತೆ ಎರಡೂ ಸಮಿತಿಯವರು ತೀರ್ಮಾನಿಸಿದರು. ಹೀಗಾಗಿ 5.4.1998 ರಂದು ಕಾಲೇಜಿನ ರಜತ ಮಹೋತ್ಸವವನ್ನು ಮದ್ರಾಸ್ ಮ್ಯೂಸಿಕ್ ಅಕಾಡೆಮಿಯ ಅಧ್ಯಕ್ಷ ಡಿ.ಟಿ.ವಾಸು ಉದ್ಘಾಟಿಸಿದರು. ಪ್ರೊ। ಎಸ್.ಕೆ.ರಾಮಚಂದ್ರರಾಯರು ಅಧ್ಯಕ್ಷತೆ ವಹಿಸಿದ್ದರು. ಶತಮಾನದ ಹಿರಿಯರು ಎಂಬ ಶೀರ್ಷಿಕೆಯಲ್ಲಿ ಎಸ್. ನಿಜಲಿಂಗಪ್ಪ, ನಿಟ್ಟೂರು ಶ್ರೀನಿವಾಸರಾಯರು, ಡಾ। ಜೆ.ನಾರಾಯಣ ರೆಡ್ಡಿ ಮೊದಲಾದ ಹಿರಿಯ ಗಣ್ಯವ್ಯಕ್ತಿಗಳನ್ನು ಸನ್ಮಾನಿಸಲಾಯಿತು. 13ರಂದು ಸಮಿತಿಯ ಸುವರ್ಣ ಮಹೋತ್ಸವ ಪ್ರಾರಂಭಗೊಂಡಿತು. ಖ್ಯಾತ ಸಂಗೀತ ವಿಮರ್ಶಕರು ಹಿರಿಯರೂ ಆಗಿದ್ದ ಬಿ.ವಿ.ಕೆ.ಶಾಸ್ತ್ರಿಯವರು ಇದನ್ನು ಉದ್ಘಾಟಿಸಿದರು. ಮೇ ತಿಂಗಳ 10ನೇ ತಾರೀಖಿನವರೆಗೆ ಇಲ್ಲಿಯೂ ವೈವಿಧ್ಯಮಯವಾದ ಕಾರ್ಯಕ್ರಮಗಳನ್ನು ನೀಡಲಾಯಿತು.

■ ಮುಂದುವರಿಯುವುದು



ಸುಧಾರಘುನಾಥನ್ ಅವರ ಕಛೇರಿ



ವಿದ್ಯಾಭೂಷಣ್ ಅವರ ಸಂಗೀತ ಕಛೇರಿ

ಬೆಂಗಳೂರು ವಿಜಯ | ಸೋಮವಾರ, 31 ಮಾರ್ಚ್ 2008



ಬೆಂಗಳೂರು ವಿವಿಯ ಎಚ್.ಎನ್ ಸಭಾಂಗಣದಲ್ಲಿ ನಡೆದ ಆರನೇ ರಾಜ್ಯ ಮಟ್ಟದ ಕರಾಟೆ ಚಾಂಪಿಯನ್‌ಶಿಪ್‌ನಲ್ಲಿ ನಗರದ ಕೊಕಿನೋ-ಶಿಟೊ-ರ್‍ಯೂ ಕರಾಟೆ ಸ್ಕೂಲ್ ಆಫ್ ಇಂಡಿಯಾದ ವಿದ್ಯಾರ್ಥಿಗಳು ಹನ್ನೊಂದು ಚಿನ್ನ ಹಾಗೂ 3 ಕಂಚಿನ ಪದಕಗಳನ್ನು ಗಳಿಸಿದರು.

# ಮಾನವೀಯ ಮೌಲ್ಯ ಬೆಳೆಸಿಕೊಳ್ಳಿ

ಬೆಂಗಳೂರು: ಮಾನವೀಯ ಮೌಲ್ಯ ಬೆಳೆಸಿಕೊಳ್ಳಬೇಕೆಂದು ಎಸ್.ಎಸ್.ಎಂ.ಆರ್.ವಿ. ಕಾಲೇಜಿನ ಸಂಸ್ಕೃತ ವಿಭಾಗದ ಮುಖ್ಯಸ್ಥ ಡಾ. ಶ್ರೀರಾಮ್ ಭಟ್ ಹೇಳಿದ್ದಾರೆ.

ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು ಕನ್ನಡ, ಸಂಸ್ಕೃತ, ಹಿಂದಿ ಹಾಗೂ ಇಂಗ್ಲಿಷ್ ಸಾಹಿತ್ಯ ವೇದಿಕೆಗಳ ಆಶ್ರಯದಲ್ಲಿ ಏರ್ಪಡಿಸಿದ್ದ ವಿಶೇಷ ಉಪನ್ಯಾಸ ಕಾರ್ಯಕ್ರಮ 'ಜಾಗತಿಕ ಯುಗದಲ್ಲಿ ಮಾನವಿಯ ಮೌಲ್ಯಗಳು' ಕುರಿತು ಉಪನ್ಯಾಸ ನೀಡಿದರು.

ಜಾಗತೀಕರಣ, ಉದಾರೀಕರಣದ ಹೆಸರಿನಲ್ಲಿ ಇಂದಿನ ಯುವ ಪೀಳಿಗೆ ಮಾನವೀಯ ಮೌಲ್ಯ ಜತೆ ಕೌಟುಂಬಿಕ ಸಂಬಂಧಗಳನ್ನು ಮರೆಯುತ್ತಿದೆ. ಇದರಿಂದ ಸಾಮಾಜಿಕ ವ್ಯವಸ್ಥೆಯ ಮೇಲೆ ಮಾರಕ ಪರಿಣಾಮ ಬೀರುತ್ತದೆ. ಇದನ್ನು ಅರಿತು ಯುವ ಜನತೆ ಸುಸಂಸ್ಕೃತ ಬದುಕು ನಡೆಸಬೇಕು ಎಂದು ಹೇಳಿದರು.




ಡಾ. ಶ್ರೀರಾಮ್‌ಭಟ್, ವೂಡೆ ಪಿ. ಕೃಷ್ಣ ಪ್ರೊ. ಚಂದ್ರಿಕಾ ಪುರಾಣಿಕ್, ಪ್ರೊ. ಎಸ್.ಐ. ಹೆಗಡೆ.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ಕನ್ನಡ ವಿಭಾಗದ ಮುಖ್ಯಸ್ಥರಾದ ಪ್ರೊ. ಚಂದ್ರಿಕಾ ಪುರಾಣಿಕ್ ಸ್ವಾಗತಿಸಿದರು. ದೀಪಿಕಾ ಭಟ್ ಕಾರ್ಯಕ್ರಮ ನಿರೂಪಿಸಿದರು. ಸಂಸ್ಕೃತ ವಿಭಾಗದ ಮುಖ್ಯಸ್ಥ ಪ್ರೊ. ಎಸ್.ಐ. ಹೆಗಡೆ ವಂದಿಸಿದರು.

# ಕಲಿಕಾ ವಿಷಯಗಳತ್ತ ಗಮನವಿರಲಿ

ಬೆಂಗಳೂರು: ಎಲ್ಲ ಬಗೆಯ ಕಲಿಕಾ ವಿಷಯಗಳತ್ತ ವಿದ್ಯಾರ್ಥಿಗಳು ಗಮನ ಹರಿಸಬೇಕು ಎಂದು ಡಾ. ಗೋವಿಂದಯ್ಯ ಹೇಳಿದ್ದಾರೆ.

ಮಾಗಡಿ ರಸ್ತೆಯ ಶೇಷಾದ್ರಿಪುರ ಕಾಮರ್ಸ್ ಕಾಲೇಜು ಅಗ್ರಹಾರ ದಾಸರಹಳ್ಳಿಯ ಡಾ. ಅಂಬೇಡ್ಕರ್ ಕ್ರೀಡಾಂಗಣದಲ್ಲಿ ಹಮ್ಮಿಕೊಂಡಿದ್ದ 'ಯಕ್ಷ' ಅಂತರ್ ಕಾಲೇಜು ಫೆಸ್ಟಿವಲ್-2008ರ ಕಾರ್ಯಕ್ರಮದಲ್ಲಿ ಮಾತನಾಡಿದರು.

ವಿದ್ಯಾರ್ಥಿಗಳು ಇತ್ತೀಚೆಗೆ ಕೇವಲ ವೈದ್ಯ ಹಾಗೂ ಎಂಜಿನಿಯರಿಂಗ್ ವೃತ್ತಿಯನ್ನು ಮಾತ್ರ ಗಮನದಲ್ಲಿಟ್ಟುಕೊಂಡು ವಿದ್ಯೆ ಕಲಿಯುತ್ತಿದ್ದಾರೆ. ಆದರೆ ಈ ವೃತ್ತಿಗಳೇ ಹಣ ಅಥವಾ ಯಶಸ್ಸನ್ನು ತಂದು ಕೊಡುವುದಿಲ್ಲ. ಹೀಗಾಗಿ ಎಲ್ಲ ಬಗೆಯ ವಿಷಯಗಳ ಕಲಿಕೆಗೆ ಆಸಕ್ತಿ ತೋರಬೇಕು ಎಂದು ತಿಳಿಸಿದರು.

ಪಾಲಕರು ತಮ್ಮ ಮಕ್ಕಳು ಇಂಥದ್ದೇ ವಿಷಯ ಓದಬೇಕು ಎಂದು ತಾಕೀತು ಮಾಡುತ್ತಾರೆ. ಮಕ್ಕಳನ್ನು ಬಲವಂತವಾಗಿ ಇಷ್ಟವಿಲ್ಲದ ವಿಷಯವನ್ನು ತೆಗೆದುಕೊಳ್ಳಲು ಒತ್ತಾಯ ಮಾಡದೆ ಮಕ್ಕಳ ಆಯ್ಕೆಗೆ ಬಿಡಬೇಕೆಂದು ಅವರು ಹೇಳಿದರು.

ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಮಾತನಾಡಿ, ವಿದ್ಯಾರ್ಥಿ ಜೀವನದಲ್ಲಿ ಭವಿಷ್ಯದ ಕುರಿತು ಉತ್ತಮ ಕನಸು ಹಾಗೂ ಪ್ರಯತ್ನದಿಂದ ಗುರಿಯನ್ನು ಸಾಧಿಸಲು ಸಾಧ್ಯ ಎಂದರು.

ಆಧುನಿಕ ಯುಗದಲ್ಲಿ ಮಾನವ ಕೂಡ ಯಂತ್ರದಂತೆ ಕಾರ್ಯ ನಿರ್ವಹಿಸುತ್ತಿದ್ದಾನೆ. ಭಾವನೆಗಳಿಗೆ ಬೆಲೆಯೇ ಇಲ್ಲದಂತಾಗಿದೆ. ಆದರೆ ಆತ ಕೇವಲ ಯಂತ್ರ ಮಾನವರಾಗದೇ ಮೌಲ್ಯಯುತ ಬದುಕು ನಡೆಸಬೇಕೆಂದು ಕರೆ ನೀಡಿದರು.

ಇದೇ ಸಂದರ್ಭದಲ್ಲಿ ಜಾನಪದ ಗಾಯಕ ವೀರೇಶ್ ಬಳ್ಳಾರಿಯವರನ್ನು ಅಭಿನಂದಿಸಲಾಯಿತು.

ಚಲನಚಿತ್ರ ನಟ ಅನಿರುದ್ಧ್, ಸರೋಜಾ ನಂಜಪ್ಪ ಶ್ರೀನಿವಾಸ ಉಪಸ್ಥಿತರಿದ್ದರು. ಈ ಸಂದರ್ಭದಲ್ಲಿ ನಾನಾ ಕಾಲೇಜಿನ ಕಲಾ ತಂಡಗಳು ಜಾನಪದ ನೃತ್ಯ ಪ್ರದರ್ಶಿಸಿದವು.



**ಶೇಷಾದ್ರಿಪುರ ಕಾಮರ್ಸ್ ಕಾಲೇಜು ಏರ್ಪಡಿಸಿದ್ದ 'ಯಕ್ಷ' ಅಂತರ್ ಕಾಲೇಜು ಫೆಸ್ಟಿವಲ್-2008 ಉದ್ಘಾಟನಾ ಸಮಾರಂಭದಲ್ಲಿ ವೀರೇಶ್ ಬಳ್ಳಾರಿ, ಡಾ. ಗೋವಿಂದಯ್ಯ, ಅನಿರುದ್ಧ ಸರೋಜಾ ನಂಜಪ್ಪ ಶ್ರೀನಿವಾಸ್ ಹಾಜರಿದ್ದರು.**

ಉದಯವಾಣಿ
ಮಾರ್ಚ್ 27, 2008

# ಧನ ಸಹಾಯ



ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಹಾಗೂ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ರಕ್ತದ ಕ್ಯಾನ್ಸರ್‌ನಿಂದ ನರಳುತ್ತಿರುವ ಸ್ವಿಟಿ ಮನೆಗೆ ಭೇಟಿ ನೀಡಿ ಆರ್ಥಿಕ ನೆರವು ನೀಡಿದರು.

ಪ್ರಜಾವಾಣಿ ಭಾನುವಾರ 23ನೇ ಮಾರ್ಚ್ 2008



ಯಲಹಂಕದ ಶೇಷಾದ್ರಿಪುರಂ ಕಾಲೇಜಿನಲ್ಲಿ ವಿಶ್ವ ಅರಣ್ಯ ದಿನಾಚರಣೆ ಹಿನ್ನೆಲೆಯಲ್ಲಿ ನಡೆದ 'ಅರಣ್ಯ ಮತ್ತು ಪರಿಸರ' ಕುರಿತ ಚರ್ಚಾಸ್ಪರ್ಧೆಯಲ್ಲಿ ವಿಜೇತರಾದ ವಿದ್ಯಾರ್ಥಿಗಳಿಗೆ ಭಾರತೀಯ ಅರಣ್ಯ ಸೇವೆಯ ನಿವೃತ್ತ ಅಧಿಕಾರಿ ಅಜ್ಜಂಪುರ ಕೃಷ್ಣಸ್ವಾಮಿ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ವೂಡೆ.ಪಿ.ಕೃಷ್ಣ ಅವರು ಬಹುಮಾನ ವಿತರಿಸಿದರು. ಕೃ.ವಿ.ವಿ. ಸಂಶೋಧನಾ ನಿರ್ದೇಶಕ ಡಾ.ಟಿ.ಕೆ.ಪ್ರಭಾಕರ ಶೆಟ್ಟಿ ಮತ್ತಿತರರು ಚಿತ್ರದಲ್ಲಿದ್ದಾರೆ.

# 'ಅರಣ್ಯ ಅತಿಕ್ರಮಣ ತಡೆ ಅಗತ್ಯ'

ಯಲಹಂಕ: ಅರಣ್ಯ ಭೂಮಿ ಅತಿಕ್ರಮಣವಾಗದಂತೆ ತಡೆಗಟ್ಟುವುದು ಇಂದಿನ ಅಗತ್ಯತೆಯಾಗಿದ್ದು, ಇದಕ್ಕೆ ರಾಜಕೀಯ ಇಚ್ಛಾಶಕ್ತಿ ಇರಬೇಕಾಗುತ್ತದೆ ಎಂದು ಭಾರತೀಯ ಅರಣ್ಯ ಸೇವೆಯ ನಿವೃತ್ತ ಅಧಿಕಾರಿ ಅಜ್ಜಂಪುರ ಕೃಷ್ಣಸ್ವಾಮಿ ಹೇಳಿದರು.

ರಾಷ್ಟ್ರೀಯ ಅರಣ್ಯೀಕರಣ ಮತ್ತು ಪರಿಸರ ಅಭಿವೃದ್ಧಿ ಮಂಡಳಿಯ ಪ್ರಾದೇಶಿಕ ಕೇಂದ್ರ ಹಾಗೂ ಕೃಷಿ ವಿಜ್ಞಾನಗಳ ವಿಶ್ವವಿದ್ಯಾನಿಲಯ ಜಿ.ಕೆ.ವಿ.ಕೆ. ಇವರ ಸಂಯುಕ್ತ ಆಶ್ರಯದಲ್ಲಿ ಶೇಷಾದ್ರಿಪುರಂ ಕಾಲೇಜಿನಲ್ಲಿ ಏರ್ಪಡಿಸಿದ್ದ ವಿಶ್ವ ಅರಣ್ಯ ದಿನಾಚರಣೆ ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿದರು.

ಪ್ರತಿಯೊಂದು ಕಾಡು ತನ್ನದೇ ಆದ ಗುಣ ಹೊಂದಿರುತ್ತದೆ. ಅಂತಹ ಕಾಡುಗಳನ್ನು ನಾಶ ಮಾಡಿದರೆ, ಪರಿಸರದಲ್ಲಿ ಅಸಮತೋಲನ ತಲೆದೋರುತ್ತದೆ. ಈ ದಿಸೆಯಲ್ಲಿ ಸ್ವಾಭಾವಿಕ ಕಾಡುಗಳನ್ನು ಹಾಗೆಯೇ ಕಾಪಾಡಿಕೊಂಡು ಹೋಗಬೇಕಾದುದು ನಮ್ಮೆಲ್ಲರ ಕರ್ತವ್ಯ ಎಂದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ವೂಡೆ.ಪಿ.ಕೃಷ್ಣ ಮಾತನಾಡಿ, ಹಸಿರು ಕ್ರಾಂತಿಗೆ ಒತ್ತು ನೀಡಿ ಕೃತಕ ರಾಸಾಯನಿಕ ಗೊಬ್ಬರಗಳನ್ನು ಬಳಸಿ ಪರಿಸರವನ್ನು ಹಾಳು ಮಾಡಿಕೊಂಡಿದ್ದೇವೆ. ಈ ದಿಸೆಯಲ್ಲಿ ಸಾವಯವ ಗೊಬ್ಬರಗಳನ್ನು ಬಳಸಬೇಕು ಎಂದು ತಿಳಿಸಿದರು.

ಕೃ.ವಿ.ವಿ. ರಾಷ್ಟ್ರೀಯ ಅರಣ್ಯೀಕರಣ ಮತ್ತು ಪರಿಸರ ಅಭಿವೃದ್ಧಿ ಮಂಡಳಿಯ ಪ್ರೊಫೆಸರ್ ಡಾ.ವಿ.ಭಾಸ್ಕರ್ ಅವರು, 'ಅರಣ್ಯನಾಶ, ಹವಾಮಾನ ವೈಪರೀತ್ಯ–ಜಾಗತಿಕ ಸವಾಲುಗಳು' ಕುರಿತು ಉಪನ್ಯಾಸ ನೀಡಿದರು. 'ಅರಣ್ಯ ಮತ್ತು ಪರಿಸರ' ಕುರಿತು ಆಯೋಜಿಸಲಾಗಿದ್ದ ಚರ್ಚಾಸ್ಪರ್ಧೆ ಮತ್ತು ಆಶುಭಾಷಣ ಸ್ಪರ್ಧೆಯಲ್ಲಿ ವಿಜೇತರಾದ ವಿದ್ಯಾರ್ಥಿಗಳಿಗೆ ಬಹುಮಾನ ವಿತರಿಸಲಾಯಿತು. ಕೃ.ವಿ.ವಿ. ಸಂಶೋಧನಾ ನಿರ್ದೇಶಕ ಡಾ.ಟಿ.ಕೆ.ಪ್ರಭಾಕರ ಶೆಟ್ಟಿ, ಶೇಷಾದ್ರಿಪುರಂ ಪ್ರಥಮದರ್ಜೆ ಕಾಲೇಜಿನ ಪ್ರಾಂಶುಪಾಲ ಡಾ.ಎಂ.ಪ್ರಕಾಶ್ ಮತ್ತಿತರರು ಉಪಸ್ಥಿತರಿದ್ದರು.

# ವೃತ್ತಿಗಾಗಿ ಓದುವುದು ಬಿಡಿ

ಬೆಂಗಳೂರು, ಮಾ.23- ವಿದ್ಯಾರ್ಥಿಗಳು ಕೇವಲ ಎಂಜಿನಿಯರ್ ಹಾಗೂ ವೈದ್ಯ ವೃತ್ತಿಯನ್ನು ಗಮನದಲ್ಲಿಟ್ಟುಕೊಂಡು ಓದುವ ಪರಿಪಾಠವನ್ನು ಬದಿಗೊತ್ತಿ ಇತರೆ ವಿಷಯಗಳಲ್ಲಿಯೂ ಆಸಕ್ತಿಯನ್ನು ರೂಢಿಸಿಕೊಳ್ಳಬೇಕೆಂದು ಡಾ.ಗೋವಿಂದಯ್ಯ ಅಭಿಪ್ರಾಯ ಪಟ್ಟರು.

ಮಾಗಡಿ ರಸ್ತೆ ಶೇಷಾದ್ರಿಪುರಂ ಕಮಾರ್ಸ್ ಕಾಲೇಜು ವತಿಯಿಂದ ಯಕ್ಷ ಅಂತರ ಕಾಲೇಜ್ ಫೆಸ್ಟಿವಲ್-2008ರ ಕಾರ್ಯಕ್ರಮವನ್ನು ಅಗ್ರಹಾರ ದಾಸರಹಳ್ಳಿಯಲ್ಲಿರುವ ಡಾ.ಅಂಬೇಡ್ಕರ್ ಕ್ರೀಡಾಂಗಣದಲ್ಲಿ ಹಮ್ಮಿಕೊಂಡಿದ್ದ ಸಮಾರಂಭದಲ್ಲಿ ಭಾಗವಹಿಸಿ ಮಾತನಾಡಿದ ಅವರು, ಪಾಲಕರು ಮಕ್ಕಳನ್ನು ಬಲವಂತವಾಗಿ ಇಷ್ಟವಿಲ್ಲದ ವಿಷಯವನ್ನು ತೆಗೆದುಕೊಳ್ಳಲು ಒತ್ತಾಯ ಮಾಡದೆ ಮಕ್ಕಳ ಆಯ್ಕೆಗೆ ಬಿಡಬೇಕು ಎಂದರು.

ಉದ್ಘಾಟನೆಯನ್ನು ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ನೆರವೇರಿಸಿದರು.

ವೇದಿಕೆಯಲ್ಲಿ ಖ್ಯಾತ ಜನಪದ ಗಾಯಕ ವೀರೇಶ್ ಬಳ್ಳಾರಿಯವರನ್ನು ಆತ್ಮೀಯವಾಗಿ ಅಭಿನಂದಿಸಲಾಯಿತು. ವಿದ್ಯಾರ್ಥಿ ದಿಸೆಯಲ್ಲಿ ಭವಿಷ್ಯದ ಕುರಿತು ಹಿರಿದಾದ ಕನಸು ಹಾಗೂ ಆಸೆಯನ್ನು ಹೊಂದಿದಾಗ ಉತ್ತಮ ಗುರಿಯನ್ನು ಸಾಧಿಸಲು ಸಾಧ್ಯ ಎಂದು ತಿಳಿಸಿದರು. ಕೇವಲ ಯಂತ್ರ ಮಾನವರಾಗದೇ ಮೌಲ್ಯಯುತ ಮಾನವರಾಗಲು ಸಾಂಸ್ಕೃತಿಕವಾಗಿ ಶ್ರೀಮಂತರಾಗಬೇಕೆಂದು ಕರೆ ನೀಡಿದರು.

ಚಲನಚಿತ್ರ ನಟರಾದ ಅನಿರುದ್, ಸರೋಜ ನಂಜಪ್ಪ ಹಾಗೂ ಶ್ರೀನಿವಾಸ್ ಮೊದಲಾದವರು ಉಪಸ್ಥಿತರಿದ್ದರು.

ಇದೇ ಸಂದರ್ಭದಲ್ಲಿ ವಿವಿಧ ಕಾಲೇಜ್‌ಗಳಿಂದ ಆಗಮಿಸಿದ್ದ ಕಲಾ ತಂಡಗಳು ಜಾನಪದ ನೃತ್ಯ ಹಾಗೂ ಸಮೂಹ ನೃತ್ಯಗಳನ್ನು ಮನಮೋಹಕವಾಗಿ ನಡೆಸಿಕೊಟ್ಟರು.

ಕಾಲೇಜಿನ ಉಪನ್ಯಾಸಕರಾದ ಡಾ.ಶಾರದಾ, ರವಿಕುಮಾರ್, ಯಲ್ಲಮ್ಮ ಹಾಗೂ ಮುಂತಾದವರು ಹಾಜರಿದ್ದರು.



ಮಾಗಡಿ ರಸ್ತೆಯ ಶೇಷಾದ್ರಿಪುರ ಕಾಮರ್ಸ್ ಕಾಲೇಜ್ ವತಿಯಿಂದ 'ಯಕ್ಷ' ಅಂತರ ಕಾಲೇಜ್ ಸಾಂಸ್ಕೃತಿಕ ಉತ್ಸವ-2008ರ ಉದ್ಘಾಟನಾ ಸಮಾರಂಭದಲ್ಲಿ ಜನಪರ ಗಾಯಕ ವೀರೇಶ್ ಬಳ್ಳಾರಿ, ವೂಡೆ ಪಿ.ಕೃಷ್ಣ, ಸರೋಜ ನಂಜಪ್ಪ, ಡಾ.ಗೋವಿಂದಯ್ಯ, ಚಿತ್ರನಟ ಅನಿರುದ್ ಮೊದಲಾದವರು ಉಪಸ್ಥಿತರಿದ್ದರು.

ಬೆಂಗಳೂರು ವಿಜಯ | ಬುಧವಾರ 19 ಮಾರ್ಚ್ 2008

## ಸುದ್ದಿ ಚಿತ್ರ



ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಅವರು ಕ್ಯಾನ್ಸರ್‌ನಿಂದ ಬಳಲುತ್ತಿರುವ ಮಗು ಸ್ವೀಟಿಗೆ ಆರ್ಥಿಕ ನೆರವು ನೀಡಿದರು. ಕೋಶಾಧ್ಯಕ್ಷ ರಾಜು ಚಂದ್ರಶೇಖರ್ ಹಾಜರಿದ್ದರು.



ಬೆಂಗಳೂರು ಇತಿಹಾಸ ಮಾಲೆ

■ಸುರೇಶ್ ಮೂನ

# ರಸಾನುಭವಿಗಳ ಪವಿತ್ರ ವೇದಿಕೆ

ಶೇಷಾದ್ರಿಪುರಂ ರಾಮ ಸೇವಾ ಸಮಿತಿಯ ಪ್ರಸ್ತುತ ಕಾರ್ಯಕಾರಿ ಸಮಿತಿಯ ಸದಸ್ಯರಾಗಿರುವವರು ಟಿ.ಆರ್. ಸುಬ್ಬಣ್ಣ, ಟಿ. ಸದಾನಂದಮಯ್ಯ, ಡಾ। ಸಿ.ಎನ್. ಗುಪ್ತ, ಪ್ರೊ। ಪಿ. ಕೃಷ್ಣ, ಡಿ.ಕೆ. ಗುರುರಾಜ್, ವಿ. ರಾಮಚಂದ್ರಮೂರ್ತಿ, ಆರ್. ಕೃಷ್ಣಮೂರ್ತಿ, ಡಿ. ಕುಪ್ಪಸ್ವಾಮಿ ಮತ್ತು ಕುಮುದಾ ವೆಂಕಟೇಶ್. ಖಜಾಂಚಿಯಾಗಿರುವವರು ರೇವತಿ ತಾರಕರಾಮ್. ಕಳೆದ ವರ್ಷದ ವರೆಗೂ ಈ ಸಮಿತಿಯಲ್ಲಿ ಸೇವೆ ಸಲ್ಲಿಸಿದ ಹಿರಿಯ ವಕೀಲರಾಗಿರುವ ಬಿ.ವಿ. ನಾಗರತ್ನ ಅವರು ವೃತ್ತಿಯಲ್ಲಿ ಹೆಚ್ಚಿನ ಜವಾಬ್ದಾರಿಯನ್ನು ವಹಿಸಬೇಕಾದ್ದರಿಂದ ಈ ಕಾರ್ಯಭಾರದಿಂದ ಮುಕ್ತರಾದರು.

ಕಳೆದ 59 ವರ್ಷಗಳಿಂದ ಈ ಸಮಿತಿಯು ಶ್ರೀರಾಮ ನವಮಿಯ ದಿನದಿಂದ ಶಾಸ್ತ್ರೀಯ ಸಂಗೀತ ಕಾರ್ಯಕ್ರಮಗಳನ್ನು ಪ್ರಾರಂಭಿಸಿ ಸುಮಾರು ಮೂರು ನಾಲ್ಕು ವಾರಗಳ ಅವಧಿವರೆಗೆ ಸಂಧ್ಯಾಕಾಲದಲ್ಲಿ ಅವುಗಳನ್ನು ಏರ್ಪಡಿಸುತ್ತಾ ಬರುತ್ತಿದೆ. ಈ ಸಂದರ್ಭದಲ್ಲಿ ಸಮಿತಿಯು ತನ್ನ ಸಂಸ್ಥಾಪಕ ಗಣ್ಯ ಮಹನೀಯರ ಸೇವೆ ಹಾಗೂ ಈ ಸಂಸ್ಥೆಯ ಬೆಳವಣಿಗೆಗೆ ಅವರು ನೀಡಿರುವ ಕೊಡುಗೆಯನ್ನು ಗೌರವಾದರಗಳೊಂದಿಗೆ ಸ್ಮರಿಸಿ ನಮನ ಸಲ್ಲಿಸುತ್ತದೆ. ಮೊದಲ ದಿನ ಬೆಳಗ್ಗೆ ಶ್ರೀರಾಮದೇವರ ಪೂಜೆ, ನವಗ್ರಹಾವಾಹನೆ ಮುಂತಾದ ಪೂಜಾ ವಿಧಿಗಳೊಂದಿಗೆ ಆರಂಭವಾಗುವ ಈ ಕಾರ್ಯಕ್ರಮದಲ್ಲಿ ಮೂರು ಅಥವ ನಾಲ್ಕು ವಾರಗಳ ಕಾಲ ಪ್ರತಿ ಸಂಜೆಯೂ ಶಾಸ್ತ್ರೀಯ ಸಂಗೀತದ ಆರಾಧನೆ ನಡೆಯುತ್ತದೆ. ಶ್ರೀರಾಮ ಪಟ್ಟಾಭಿಷೇಕ ದಿನದಂದು ನಡೆಯುವ ಲಕ್ಷಾರ್ಚನೆ ಇಲ್ಲಿನ ವಿಶೇಷ ಸಂಗತಿ. ಈ ಪೂಜೆಯಲ್ಲಿ ಜಾತಿ, ವರ್ಗ, ವರ್ಣ, ಹಣ ಯಾವುದರ ಬೇಧಭಾವವನ್ನು ಮಾಡದೇ ಜನಸಾಮಾನ್ಯರೆಲ್ಲ ಪುಷ್ಪಾರ್ಚನೆ ಮೂಲಕ ಭಗವಂತನನ್ನು ಆರಾಧಿಸಲು ಅನುವು ಮಾಡಿಕೊಡಲಾಗುತ್ತದೆ. ಇದರಿಂದಾಗಿ ಭಕ್ತರು ಸಾರ್ಥಕ್ಯದ ಭಾವನೆ ಪಡೆಯುತ್ತಾರೆ. ಸಂಜೆ ವೇಳೆ ನಡೆಯುವ ಸಂಗೀತ ಕಾರ್ಯಕ್ರಮಗಳಿಗೆ ಬರುವ ಶ್ರೋತೃಗಳು ಉತ್ತಮ ಅಭಿರುಚಿಯುಳ್ಳವರಾಗಿರುತ್ತಾರೆ. ಸಾಮಾನ್ಯವಾಗಿ ಇಂತಹ ಕಾರ್ಯಕ್ರಮಗಳಿಗೆ ಪ್ರವೇಶದರವನ್ನು ನಿಗದಿ ಮಾಡುವುದುಂಟು. ಆದರೆ ಇಲ್ಲಿ ಪ್ರವೇಶ ಉಚಿತ.



ಡಿ. ಗೋಪಾಲ ಅಯ್ಯಂಗಾರ್

ಈ ಕಾರ್ಯಕ್ರಮದಲ್ಲಿ ಭಾಗವಹಿಸುವ ಕಲಾವಿದರೆಲ್ಲ ಸಂಗೀತಾಭಿಮಾನಿಗಳಿಗೆ ಸಂಗೀತ ಸುಧೆಯ ರಸಾದೌತಣ ಉಣಬಡಿಸುತ್ತಾರೆ, ಮಹರಾಜಪುರಂ ಸಂತಾನಂ, ವಿಶ್ವನಾಥ ಅಯ್ಯರ್, ಚೆಂಬೈ, ಅರಿಯಕುಡಿ, ಎಂ.ಎಲ್. ವಸಂತಕುಮಾರಿ, ಎಂ.ಎಸ್. ಸುಬ್ಬಲಕ್ಷ್ಮೀ, ವಸಂತ ಕೋಕಿಲ, ಟಿ. ಚೌಡಯ್ಯ, ಪಾಲಘಾಟ್ ಮಣಿ, ತ್ರಿಚೂರ್ ವಿ. ರಾಮಚಂದ್ರನ್, ತ್ರಿಚೂರ್ ಅನಂತಪದ್ಮನಾಭನ್, ಸರಳಾಯ ಸೋದರಿಯರು, ಡಾ। ಟಿ.ಎಸ್. ಸತ್ಯವತಿ- ಮುಂತಾದ ಸಂಗೀತ ಕ್ಷೇತ್ರದ ಮಹಾಮಹಿಮರು ಇಲ್ಲಿ ಕಛೇರಿ ನೀಡಿದ್ದಾರೆ. ಇಂದಿನ ಪೀಳಿಗೆಯವರಾದ ಸುಧಾರಘುನಾಥನ್, ವಿದ್ಯಾಭೂಷಣ, ಸುಕನ್ಯಾ ಪ್ರಭಾಕರ್, ರಾಜಕುಮಾರ್ ಭಾರತಿ, ಕದ್ರಿ ಗೋಪಿನಾಥ್, ಎಸ್. ಸೌಮ್ಯ, ಪ್ರವೀಣ್ ಗೋಡ್ಖಿಂಡಿ ಮುಂತಾದ ಅತ್ಯಂತ ಪ್ರತಿಭಾನ್ವಿತ ಕಲಾವಿದರು ಇಲ್ಲಿಯ ಶ್ರೋತೃಗಳಿಗೆ ರಸಾನುಭವ ಒದಗಿಸಿದ್ದಾರೆ. ಹಾಗೆಂದು ಈ ವೇದಿಕೆ ಪ್ರಸಿದ್ಧರಾದವರಿಗೆ ಮಾತ್ರ ಸೀಮಿತವಲ್ಲ. ಉದಯೋನ್ಮುಖರಿಗೂ ಅವಕಾಶ ನೀಡಿ ಅವರನ್ನೂ ಉತ್ತಮ ಕಲಾವಿದರಾಗಿ ರೂಪಿಸುತ್ತಿದೆ. ಬೆಂಗಳೂರಿನಿಂದಷ್ಟೇ ಅಲ್ಲದೆ ರಾಜ್ಯದ ಬೇರೆ ಭಾಗಗಳಿಂದ ಯುವ ಪ್ರತಿಭಾವಂತರು ಇಲ್ಲಿನ ಕಾರ್ಯಕ್ರಮಗಳಿಗಾಗಿ ಆಹ್ವಾನಿತರಾಗುತ್ತಿದ್ದಾರೆ. ಒಟ್ಟಾರೆ ಅತ್ಯಂತ ಉತ್ತಮ ಗುಣಮಟ್ಟದ ಕಾರ್ಯಕ್ರಮಗಳನ್ನು ನೀಡುವುದು ಈ ಸಮಿತಿಯ ಮೂಲ ಗುರಿ.

ವೇದಿಕೆಯ ಮತ್ತೊಂದು ಗಮನಾರ್ಹ ಸಂಗತಿಯೆಂದರೆ, ಇಲ್ಲಿನ ಶ್ರೋತೃಗಳು ಮತ್ತು ಕಲಾವಿದರ ನಡುವೆ ಉಂಟಾಗುವ ಅಪೂರ್ವ ಸಂಬಂಧ. ಇಲ್ಲಿ ಕಛೇರಿ ನೀಡುವ ಹಿರಿಯ ಕಲಾವಿದರಾದಿಯಾಗಿ ಎಲ್ಲರಿಗೂ ಈ ವೇದಿಕೆ ಹಾಗು ಶ್ರೋತೃಗಳ ಬಗ್ಗೆ ಅಪಾರ ಗೌರವ. ಈ ಬಗ್ಗೆ ಪ್ರೊ। ಎಚ್.ಬಿ.ಪಿ. ವೆಂಕಟೇಶ್ ಹೀಗೆ ನುಡಿಯುತ್ತಾರೆ. 'ಇದು ಎಲ್ಲ ವೇದಿಕೆಗಳಂತಲ್ಲ. ಇಲ್ಲಿ ದೊರಕುವ ಸ್ಪಂದನವೇ ಅತ್ಯಂತ ವಿಶಿಷ್ಟ, ವಿಭಿನ್ನ' ಎಂಬುದು ಅನೇಕ ಕಲಾವಿದರ ಅಭಿಪ್ರಾಯ. ಸುಮಾರು ಒಂದೂವರೆ ದಶಕಗಳ ಕಾಲ ಇಲ್ಲಿ ಸಂಗೀತ ಕಛೇರಿ ನಡೆಸಿರುವ ನೇದುನೂರಿ ಕೃಷ್ಣಮೂರ್ತಿ, ನಾನು ಇಲ್ಲಿ ಸಾಕ್ಷಾತ್ ಶ್ರೀರಾಮನನ್ನೇ ಕಾಣುತ್ತೇನೆ ಎಂದಿದ್ದರು. ಮತ್ತೊಬ್ಬ ಹಿರಿಯ ಕಲಾವಿದರಾದ ಸಂತಾನ ಗೋಪಾಲನ್, ಈ ವೇದಿಕೆ ಬಹಳ ಪವಿತ್ರ ಅದಕ್ಕೇ ನಾನು ಅಂಗಿ ತೊಡುವುದಿಲ್ಲ ಎಂದು ಕಛೇರಿಯುದ್ದಕ್ಕೂ ಶಲ್ಯವನ್ನೇ ಹೊದ್ದಿರುತ್ತಿದ್ದರು. ಕಲಾವಿದರು ಈ ಸ್ಥಳದ ಬಗ್ಗೆ ಇಂತಹ ಭಕ್ತಿಭಾವವನ್ನು ಹೊಂದಿರುವುದರಿಂದಲೇ ಸಹಜವಾಗಿ ಅವರಿಂದ ಹೊರಹೊಮ್ಮುವ ಗಾನಸುಧೆ ಅಷ್ಟೇ ರಸವತ್ತಾಗಿರುತ್ತದೆ. ಈ ಕಲಾವಿದರಿಗೆ ಈ ವೇದಿಕೆಯ ಬಗ್ಗೆ ಇರುವಷ್ಟೇ ಗೌರವ ಇಲ್ಲಿನ ಶ್ರೋತೃ ವೃಂದದ ಬಗ್ಗೆಯೂ ಉಂಟು. ಏಕೆಂದರೆ ಇಲ್ಲಿಗೆ ಬರುವವರೆಲ್ಲ ಸುಮ್ಮನೆ ಕುಳಿತು ಹಾಡನ್ನು ಕೇಳುವವರಲ್ಲ. ರಸಾನುಭವಿಗಳು, ಸಂಗೀತದ ಹಿನ್ನೆಲೆಯನ್ನು ಅರಿತವರು. ಕೆಲವರಿಗಂತೂ ಎಲ್ಲ ರಾಗಗಳ ಪರಿಚಯ ಉಂಟು. ಕಛೇರಿ ಪ್ರಾರಂಭವಾದ ಸ್ವಲ್ಪ ಹೊತ್ತಿನಲ್ಲೇ ಅದರ ಒಟ್ಟಾರೆ ಸ್ವರೂಪ ಅರಿಯಬಲ್ಲರು. ಹೀಗಾಗಿ ಇಲ್ಲಿಗೆ ಬರುವ ಅನೇಕ ಕಲಾವಿದರು ಈ ವೇದಿಕೆಯನ್ನು ಒಂದು ಮಾಪನವನ್ನಾಗಿ ಇಟ್ಟುಕೊಂಡಿದ್ದಾರೆ. ಈ ಶ್ರೋತೃಗಳ ಮೆಚ್ಚುಗೆ ಪಡೆದರೆ ತಾವು ಸಾಧನೆಯ ಒಂದು ಗಮನಾರ್ಹ ಹಂತವನ್ನು ತಲುಪಿದ್ದೇವೆ ಎಂಬ ನಂಬಿಕೆ ಅವರದ್ದು. ಕಛೇರಿ ಪ್ರಾರಂಭವಾದ 10-15 ನಿಮಿಷದಲ್ಲಿ ಈ ಶ್ರೋತೃಗಳು ನಮ್ಮ ರಾಗಗಳಿಗೆ ಸ್ಪಂದಿಸ ತೊಡಗುತ್ತಾರೆ. ಹೀಗಾಗಿ ನಮ್ಮ ಅವರ ನಡುವೆ ಒಂದು ರೀತಿಯ ಅವಿನಾಭಾವ ಸಂಬಂಧ ಏರ್ಪಡುತ್ತದೆ. ಇದೊಂದು ಕಾರ್ಯಕ್ರಮ ಎನಿಸದೇ ಶ್ರೋತೃ ರೂಪದಲ್ಲೇ ಕುಳಿತಿರುವ ಭಗವಂತನಿಗೆ ಸಂಗೀತದ ಮೂಲಕ ಸೇವೆಯನ್ನು ಸಲ್ಲಿಸುತ್ತಿದ್ದೇವೆ ಎಂಬ ಭಾವನೆ ಮೂಡುತ್ತಿದ್ದೇವೆ. ಮೂರು ಗಂಟೆಗಳು ಕಳೆದದ್ದು ತಿಳಿಯುವುದೇ ಇಲ್ಲ. ಆಯಾಸವಂತೂ ಆಗುವುದೇ ಇಲ್ಲ. ಬದಲಾಗಿ ಉತ್ತಮವಾದುದನ್ನು ರಸಾನುಭವಿಗಳಿಗೆ ನೀಡಿದ ತೃಪ್ತ ಭಾವವಿರುತ್ತದೆ ಎನ್ನುತ್ತಾರೆ ಇಲ್ಲಿ ಕಾರ್ಯಕ್ರಮ ನೀಡಿರುವ ಬಹುತೇಕ ಹಿರಿಯ- ಕಿರಿಯ ಕಲಾವಿದರು.

■ ಮುಂದುವರಿಯುವುದು





1950ರ ದಶಕದ ಒಂದು ಕಾರ್ಯಕ್ರಮ



ಸಮಿತಿಯಲ್ಲಿ ಸೇವೆ ಸಲ್ಲಿಸಿದ ಮಹನೀಯರು

ಬೆಂಗಳೂರಿನ ಹೆಮ್ಮೆಯ ಸಂಸ್ಥೆಗಳು: ಶೇಷಾದ್ರಿಪುರಂ ರಾಮ ಸೇವಾ ಸಮಿತಿ

ಸಂಜೆವಾಣಿ

ಸೋಮವಾರ 17 ಮಾರ್ಚ್ 2008



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ರಾಜ್ಯ ಶಾಖೆ ಉಪಾಧ್ಯಕ್ಷ ವಾಡೇ ಜಿ. ಕೃಷ್ಣ ಹಾಗೂ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ರಕ್ತದ ಕ್ಯಾನ್ಸರ್‌ನಿಂದ ನರಳುತ್ತಿರುವ ಕುಮಾರಿ ಸ್ವೀಟಿ ಮನೆಗೆ ಭೇಟಿ ನೀಡಿ ಆರ್ಥಿಕ ನೆರವು ನೀಡಿದರು ಹಾಗೂ ಚಿಕಿತ್ಸೆಗೆ ಬೇಕಾಗಿರುವ ರಕ್ತದ ಪೂರೈಕೆಯನ್ನು ರೆಡ್‌ಕ್ರಾಸ್ ವತಿಯಿಂದ ಮಾಡುವುದಾಗಿ ತಿಳಿಸಿದರು.

ಈ ಸಂಜೆ
ಭಾನುವಾರ
16-03-2008

## ಈ ಸಂಜೆ ಸುದ್ದಿಗೆ ಸಿಕ್ಕ ಫಲಶ್ರುತಿ



ರಕ್ತದ ಕ್ಯಾನ್ಸರ್‌ನಿಂದ ನರಳುತ್ತಿರುವ ಕುಮಾರಿ ಸ್ವೀಟಿಗೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ರಾಜ್ಯ ಶಾಖೆ ಉಪಾಧ್ಯಕ್ಷ ವ್ಯೂಡೆಲ್ ಪಿ. ಕೃಷ್ಣ ಹಾಗೂ ಕೋಶಾಧ್ಯಕ್ಷ ರಾಜು ಚಂದ್ರಶೇಖರ್ ಸ್ವೀಟಿ ಮನೆಗೆ ಭೇಟಿ ನೀಡಿ ಆರ್ಥಿಕ ನೆರವು ನೀಡಿದರು ಹಾಗೂ ಚಿಕಿತ್ಸೆಗೆ ಬೇಕಾಗಿರುವ ರಕ್ತದ ಪೂರೈಕೆಯನ್ನು ರೆಡ್‌ಕ್ರಾಸ್ ವತಿಯಿಂದ ಮಾಡುವುದಾಗಿ ತಿಳಿಸಿದರು.

ಕನ್ನಡಪ್ರಭ, ಭಾನುವಾರ, 16 ಮಾರ್ಚ್ 2008



## ನೆರವು

ರಕ್ತ ಕ್ಯಾನ್ಸರ್‌ನಿಂದ
ನರಳುತ್ತಿರುವ ಸ್ವೀಟಿ
ಮನೆಗೆ ತೆರಳಿದ
ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ
ಶಾಖೆಯ ಉಪಾಧ್ಯಕ್ಷ
ವೊಡೇ ಪಿ.ಕೃಷ್ಣ ಮತ್ತು
ಕೋಶಾಧ್ಯಕ್ಷ ರಾಜು
ಚಂದ್ರಶೇಖರ್ ಆರ್ಥಿಕ
ನೆರವು ನೀಡಿದರು. ಚಿಕಿತ್ಸೆಗೆ
ರಕ್ತ ಪೂರೈಸುವ ಭರವಸೆ
ನೀಡಿದರು.

ಕನ್ನಡಪ್ರಭ, ಮಂಗಳವಾರ, 11 ಮಾರ್ಚ್ 2008

## ಮಹಿಳಾ ದಿನ



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ, ಶೇಷಾದ್ರಿಪುರ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆಗೆ ಸಾಲುಮರದ ತಿಮ್ಮಕ್ಕ ಗಿಡ ನೆಟ್ಟು ಚಾಲನೆ ನೀಡಿದರು. ಸರೋಜ ಕೆ.ಎಂ.ನಂಜಪ್ಪ, ಪೂಡೇ ಪಿ. ಕೃಷ್ಣ, ಎ.ಆರ್. ಶ್ರೀನಿವಾಸಯ್ಯ ಇದ್ದರು.

ನಾಡು ನುಡಿಯ ಹಿತರಕ್ಷಣೆಯಲ್ಲಿ 36 ವರ್ಷಗಳು
ಪ್ರತಿ ತಿಂಗಳು 10 ಮತ್ತು 25 ರಂದು ಪ್ರಕಟಣೆ

RNI No.20142/71
Regd. No PMG/KA/BGW-63/2006-08
Licenced to Post without Prepayment Licence No.Wpp (W)-24
Posted on 12th & 27th of every Month at City Market Post office, Bangalore.

# ರಾಜ್ಯಪ್ರಗತಿ

ಬೆಲೆ ರೂ.8-00 | 10-03-2008 | ಪುಟ 18

# ಶಿವರುದ್ರಾರಾಧ್ಯ ದಂಪತಿಗಳಿಗೆ ಅಭಿನಂದನೆ



ಸಮಾರಂಭದ ಉದ್ಘಾಟನೆ : ಪ್ರೊ. ಟಿ. ಕೃಷ್ಣ ಅವರು ಜ್ಯೋತಿ ಬೆಳಗುತ್ತಿದ್ದಾರೆ. ಬೇಲಿ ಮಠಾಧೀಶರು, ಎಚ್.ಬಿ.ಎಸ್. ಆರಾಧ್ಯ, ಬಿ.ಎಸ್.ವಾಗೀಶ್‌ಪ್ರಸಾದ್ ಮತ್ತು ಪ್ರೊ. ಟಿ.ಸದಾಶಿವ ಇದ್ದಾರೆ.



ಆರಾಧ್ಯ ದಂಪತಿಗಳಿಂದ ಪರಸ್ಪರ ಹಾರ ವಿನಿಮಯ. ನಿವೃತ್ತ ಚೀಫ್ ಇಂಜಿನಿಯರ್ ಬಿ.ಎ.ನಂಜುಂಡಸ್ವಾಮಿ, ಎ.ರಾಮಗೋವಿಂದರಾಜು ಮತ್ತು ಶ್ರೀ ಶ್ರೀ ಶಿವರುದ್ರಮಹಾಸ್ವಾಮಿಗಳಿದ್ದಾರೆ.

ವರದಿ: ಕೊನೆಯ ಪುಟದಲ್ಲಿ

ಸೋಮವಾರ, 10 ಮಾರ್ಚ್, 2008 ಈ ಸಂಜೆ




ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಮತ್ತು ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸ್ಟಡೀಸ್ ಸಹಯೋಗದಲ್ಲಿ ನಡೆದ ಮಹಿಳಾ ದಿನ ಕಾರ್ಯಕ್ರಮವನ್ನು ಸಾಲುಮರದ ತಿಮ್ಮಕ್ಕ ಗಿಡನೆಟ್ಟು ಉದ್ಘಾಟಿಸಿದರು. ಶಿಕ್ಷಣ ತಜ್ಞ ವೂಡೆ ಪಿ.ಕೃಷ್ಣ, ರಾಜುಚಂದ್ರಶೇಖರ್, ಟ್ರಸ್ಟಿ ಸರೋಜ ಕೆ.ಎಂ.ನಂಜಪ್ಪ, ಮೀರಾ ದೀಕ್ಷಿತ್ ಇದ್ದರು.

ಸಂಜೆವಾಣಿ

ಭಾನುವಾರ 9 ಮಾರ್ಚ್ 2008



ನಗರದಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆ ಹಾಗೂ ಯಲಹಂಕದ ಶೇಷಾದ್ರಿಪುರಂ ಇನ್ಸಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸ್ಟಡೀಸ್ ಹಮ್ಮಿಕೊಂಡಿದ್ದ ಅಂತರಾಷ್ಟ್ರೀಯ ಮಹಿಳಾ ದಿನಾಚರಣೆ ಕಾರ್ಯಕ್ರಮದಲ್ಲಿ ಪರಿಸರ ಪ್ರೇಮಿ ಸಾಲುಮರದ ತಿಮ್ಮಕ್ಕ ಸಸಿ ನೆಡುವುದರ ಮೂಲಕ ಉದ್ಘಾಟಿಸಿದರು. 'ಈ ಸಂದರ್ಭದಲ್ಲಿ ಶಿಕ್ಷಣ ತಜ್ಞ ವೂಡೇ ಪಿ. ಕೃಷ್ಣ ರೆಡ್‌ಕ್ರಾಸ್ ಕೋಶಾಧ್ಯಕ್ಷ ರಾಜು ಮುಂತಾದವರು ಇದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು 9-3-2008



ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆ ಅಂಗವಾಗಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ರಾಜ್ಯ ಶಾಖೆ ಬೆಂಗಳೂರು ಯಲಹಂಕದ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲಿ ಶನಿವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಸಾಲುಮರದ ತಿಮ್ಮಕ್ಕ ಸಸಿ ನೆಟ್ಟರು. ಈ ಸಂದರ್ಭದಲ್ಲಿ ಪ್ರೊ. ಪಿ. ಕೃಷ್ಣ, ರೆಡ್‌ಕ್ರಾಸ್ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಟ್ರಸ್ಟಿ ಸರೋಜಾ ಕೆ.ಎಂ. ನಂಜಪ್ಪ, ಕಾಲೇಜು ಆಡಳಿತ ಮಂಡಳಿ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಸಹ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಪ್ರಾಂಶುಪಾಲ ಡಾ. ಎಂ. ಪ್ರಕಾಶ್, ನಿರ್ದೇಶಕ ಡಾ. ಮೀರಾ ದೀಕ್ಷಿತ್ ಉಪಸ್ಥಿತರಿದ್ದರು.

ಬೆಂಗಳೂರು ವಿಜಯ | ಶುಕ್ರವಾರ 7 ಮಾರ್ಚ್ 2008

ಉಪನಗರ ವಾರ್ತೆ

# ಆಸ್ಪತ್ರೆಯ ನಿರ್ಮಾಣಕ್ಕೆ ತೊಡಕು: ತಿಮ್ಮಕ್ಕ

ವಿಕ ಚಿತ್ರ



ಮಹಿಳಾ ದಿನಾಚರಣೆ ಅಂಗವಾಗಿ ಯಲಹಂಕದ ಶೇಷಾದ್ರಿಪುರಂ ಕಾಲೇಜಿನಲ್ಲಿ ಸಾಲುಮರದ ತಿಮ್ಮಕ್ಕ ಅವರನ್ನು ಸನ್ಮಾನಿಸಿ ಗೌರವಿಸಲಾಯಿತು. ಸಂಸ್ಥೆಯ ಡಬ್ಲ್ಯು. ಪಿ. ಕೃಷ್ಣ, ಸಂವಾದ ಸಂಸ್ಥೆಯ ಜನಾರ್ದನ ಕೆಸರಗದ್ದೆ, ಸರೋಜಾ ನಂಜಪ್ಪ ಪಂಡಿತಾರಾಧ್ಯ, ಪ್ರಿನ್ಸಿಪಾಲ್ ಡಾ. ಪ್ರಕಾಶ್ ಉಪಸ್ಥಿತರಿದ್ದರು.

**ವಿಕ ಸುದ್ದಿಲೋಕ**

ಯಲಹಂಕ : 'ಸರಕಾರದಿಂದ ನನಗೆ ಬಿಡಿಗಾಸೂ ಸಹಾಯವಾಗಿಲ್ಲ' ಎಂದು ಸಾಲು ಮರದ ತಿಮ್ಮಕ್ಕ ಅಂತರಾಳದ ನೋವು ತೋಡಿಕೊಂಡರು.

ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸ್ಟಡೀಸ್ ಮತ್ತು ಇಂಡಿಯನ್ ರೆಡ್ ಕ್ರಾಸ್ ಸೊಸೈಟಿಯಿಂದ ಇಲ್ಲಿನ ಉಪನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆಯಲ್ಲಿ ಮಾತನಾಡಿದರು.

ದಿಲ್ಲಿಯಲ್ಲಿ ಪ್ರಶಸ್ತಿ ನೀಡಿ 500ರೂ. ಕೊಟ್ರು. ಅಜ್ಜಿ ನಾವ್ ಮತ್ತೆ ಬರ್ತೀವಿ ಅಂತ ಹೇಳಿ ಹೋದ ಅಧಿಕಾರಿಗಳು ಇಷ್ಟು ವರ್ಷಗಳಿಂದ ಇತ್ತ ತಿರುಗಿಯೂ ನೋಡಲಿಲ್ಲ. ಪತ್ರಿಕೆಗಳಲ್ಲಿ ಅದೆಷ್ಟೋ ಹಣ ಬಂದೈತೆ ಅಂತ ಬರೆದಿದ್ದಾರೆ ಅಜ್ಜಿ ಎಂದು ನನಗೆ ಪತ್ರಿಕೆ ತಂದು ತೋರಿಸ್ತಾರೆ. ಆದರೆ ಎಷ್ಟು ಬಂದೈತೆ, ಯಾರ್‍ಯಾರು ಎಷ್ಟೆಷ್ಟು ಹಣ ತೆಗೆದುಕೊಂಡ್ರೊ ನಂಗೆ ಗೊತ್ತಾಗಿಲ್ಲ. ಹೆರಿಗೆ ಆಸ್ಪತ್ರೆ ಕಟ್ಟೋ ನನ್ ಕನಸನ್ನ ರಾಜಕಾರಣಿಗಳು ನನಸು ಮಾಡಲಿಲ್ಲ' ಎಂದು ಅಲವತ್ತುಕೊಂಡರು.

ಮಾಜಿ ಮುಖ್ಯಮಂತ್ರಿ ಕುಮಾರಸ್ವಾಮಿಗೆ ಆಸ್ಪತ್ರೆ ಕಟ್ಟೋ ಬಗ್ಗೆ ಅರ್ಜಿ ಕೊಟ್ಟಾಗ ಉತ್ತರ ಬರಲಿಲ್ಲ. ಆದ್ರೂ ನಾ ಬಿಡಲಿಲ್ಲ. ಅವರ ಮನೆಗೆ ಹೋದಾಗ ಕುಮಾರಸ್ವಾಮಿ, ಬಾಲಕೃಷ್ಣ ಸಿಕ್ರು. ಆಸ್ಪತ್ರೆ ಕಟ್ಟೋ ಬಗ್ಗೆ ಕೇಳ್ದಾಗ, ಮಾಡ್ತಾನಾ, ಮಾಡ್ತಾನಾ ಅಂದ್ರು. ನಂತರ ಹೊರಟೇ ಬಿಟ್ರು' ಎಂದು ಬೇಸರ ವ್ಯಕ್ತಪಡಿಸಿದರು.

ಶಿಕ್ಷಣ ಸಂಸ್ಥೆಯ ಡಬ್ಲ್ಯು. ಪಿ. ಕೃಷ್ಣ ಮಾತನಾಡಿ, ನಮ್ಮ ಪಾಲಿಗೆ ಬಂದ ಕರ್ತವ್ಯವನ್ನು ಮಾಡಿ ಈ ಜನ್ಮ ಸಾರ್ಥಕ ಮಾಡಿಕೊಳ್ಳಬೇಕು. ಈ ಹಿನ್ನೆಲೆಯಲ್ಲಿ ಸಾಲು ಮರದ ತಿಮ್ಮಕ್ಕ ನಮ್ಮೆಲ್ಲರಿಗೂ ಆದರ್ಶರಾಗಿದ್ದಾರೆ ಎಂದರು. ಸಂವಾದ ಸಂಸ್ಥೆಯ ಜನಾರ್ದನ ಕೆಸರಗದ್ದೆ ಪ್ರತಿಕ್ರಿಯಿಸಿದರು. ಹಸಿರು ಕ್ರಾಂತಿಯಿಂದಾದ ಪರಿಣಾಮಗಳು, ಪರಿಸರ ಮಾಲಿನ್ಯ ಕುರಿತು ಸಾಕ್ಷ್ಯ ಪ್ರದರ್ಶಿಸಿ ಅರಿವು ಮೂಡಿಸಿದರು. ಸರೋಜಾ ನಂಜಪ್ಪ ಪಂಡಿತಾರಾಧ್ಯ, ಪ್ರಿನ್ಸಿಪಾಲ್ ಡಾ. ಪ್ರಕಾಶ್, ರೆಡ್‌ಕ್ರಾಸ್ ಸಂಸ್ಥೆಯ ಡಾ. ನಾರಾಯಣ್, ಡಾ. ಚಂದ್ರಶೇಖರ್, ಡಾ. ಮಧುರಾ ಹಾಜರಿದ್ದರು. ಸಾಲು ಮರದ ತಿಮ್ಮಕ್ಕನಿಗೆ ಸಂಸ್ಥೆಯ ವತಿಯಿಂದ ಸನ್ಮಾನಿಸಿ ಗೌರವಿಸಲಾಯಿತು.

ಬೆಂಗಳೂರು ವಿಜಯ | ಬುಧವಾರ 5 ಮಾರ್ಚ್ 2008



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ ಮ್ಯಾನೇಜ್‌ಮೆಂಟ್ ಸಹಯೋಗದೊಂದಿಗೆ ರಕ್ತದಾನ ಶಿಬಿರವನ್ನು ಹಮ್ಮಿಕೊಂಡಿತ್ತು. ಭಾರತ ಸೇವಾದಲದ ಪ್ರಧಾನ ಕಾರ್ಯದರ್ಶಿ ಯು. ಆರ್. ಸಭಾಪತಿ, ಕೋಶಾಧ್ಯಕ್ಷ ವೂಡೇ ಪಿ. ಕೃಷ್ಣ ಪ್ರೊ. ಸಂತಾನಮ್, ರಾಜು ಚಂದ್ರಶೇಖರ್, ಡಾ. ನಾರಾಯಣ ಹಾಜರಿದ್ದರು.

ಕನ್ನಡಪ್ರಭ, ಮಂಗಳವಾರ, 4 ಮಾರ್ಚ್ 2008

■ ಅಂತರಾಷ್ಟ್ರೀಯ ಮಹಿಳಾ ದಿನ: ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ, ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸ್ಟಡೀಸ್, ಉಪಸ್ಥಿತಿ– ಸಾಲುಮರದ ತಿಮ್ಮಕ್ಕ, ಕೆ. ಜನಾರ್ದನ್, ಪಿ.ಕೃಷ್ಣ, ಸರೋಜಾ ಕೆ.ಎಂ., ಎಸ್‌ಐಎಮ್‌ಎಸ್ ಕಾಲೇಜು ಸಭಾಂಗಣ, ಯಲಹಂಕ ನ್ಯೂ ಟೌನ್, ಮಧ್ಯಾಹ್ನ 12.

ಬೆಂಗಳೂರು ವಿಜಯ | ಮಂಗಳವಾರ 4 ಮಾರ್ಚ್ 2008

ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ: ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆ. ಅತಿಥಿ: ಪರಿಸರವಾದಿ ಸಾಲುಮರದ ತಿಮ್ಮಕ್ಕ, ಅಧ್ಯಕ್ಷತೆ: ಸೊಸೈಟಿ ಖಜಾಂಚಿ ಸರೋಜಾ ಕೆ.ಎಂ, ನಂಜಪ್ಪ. ಸ್ಥಳ: ಶೇಷಾದ್ರಿಪುರ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸ್ಟಡೀಸ್, ಯಲಹಂಕ. ಮಧ್ಯಾಹ್ನ 12.

ಪ್ರಜಾವಾಣಿ

ಮಂಗಳವಾರ 4ನೇ ಮಾರ್ಚ್ 2008

ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ: ಶೇಷಾದ್ರಿಪುರ ನಿರ್ವಹಣಾ ಅಧ್ಯಯನ ಸಂಸ್ಥೆ, ಯಲಹಂಕ. ಅಂತರರಾಷ್ಟ್ರೀಯ ಮಹಿಳಾ ದಿನ. ಅತಿಥಿಗಳು– ಸಾಲುಮರದ ತಿಮ್ಮಕ್ಕ, ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ ಉಪಾಧ್ಯಕ್ಷ ವೋಡೆ ಪಿ.ಕೃಷ್ಣ, ಮಾಜಿ ಕಾರ್ಯದರ್ಶಿ ಸರೋಜ ಕೆ.ಎಂ.ನಂಜಪ್ಪ. ಮಧ್ಯಾಹ್ನ 12.

DECCAN HERALD

Tuesday, March 4, 2008

**Indian Red Cross Society and Seshadripuram Institute of Management Studies:** International Women's Day, environmentalist Salumarada Thimmakka, Indian Red Cross Society Vice Chairman Wooday P Krishna participate, College premises, Yelahanka new Town, 12 noon.

## ಬೆಂಗಳೂರಿನ ಹೆಮ್ಮೆಯ ಸಂಸ್ಥೆಗಳು: ಬ್ರಹ್ಮ ಸಮಾಜ

# ಬ್ರಹ್ಮ ಸಮಾಜದ ಹೆಗ್ಗಳಿಕೆ

ಬೆಂಗಳೂರು ಇತಿಹಾಸ ಮಾಲೆ



■ ಸುರೇಶ್ ಮೂನ

ಬಸವನಗುಡಿ ಬ್ರಹ್ಮ ಸಮಾಜದ ಡಾ। ಅಶೋಕ್ ಗುರುದಾಸ್ ಬ್ರಹ್ಮ ಸಮಾಜದ ವೆಬ್‌ಸೈಟನ್ನು ರೂಪಿಸುವಲ್ಲಿ ಕಾರ್ಯನಿರತರಾಗಿದ್ದಾರೆ. www.bangalorebrahmosamaj.com ಎಂಬ ವಿಳಾಸದ ವೆಬ್‌ಸೈಟ್ ಸದ್ಯದಲ್ಲೇ ಕಾರ್ಯನಿರತವಾಗಲಿದೆ. ಇದು ಭಾರತದಲ್ಲಿ ಬ್ರಹ್ಮ ಸಮಾಜದ ವಿಚಾರ ವಿನಿಮಯಕ್ಕೆ ವೇದಿಕೆಯಾಗಲಿದೆ.

ಬೆಂಗಳೂರಿನ ಬ್ರಹ್ಮ ಸಮಾಜದ ಸಂಘಟನೆಯ ಬೆಳವಣಿಗೆಗೆ ಕೊಡುಗೆ ಕೊಟ್ಟ ಮಹನೀಯರುಗಳಲ್ಲಿ ಸಿ.ಎನ್.ಎನ್.ರಾಜು ರವರು ಒಬ್ಬರು. ಯುವಕರಾಗಿದ್ದಾಗಿನಿಂದಲೂ ಇದರಲ್ಲಿ ಸಕ್ರಿಯವಾಗಿ ಪಾಲ್ಗೊಂಡಿರುವ ಇವರು ಬ್ರಹ್ಮೋ ಸೆಂಟ್ರಲ್ ಕೌನ್ಸಿಲ್‌ನ ಗೌರವ ಖಜಾಂಚಿಯಾಗಿಯೂ ಸೇವೆ ಸಲ್ಲಿಸಿದ್ದಾರೆ. ಈ ಸಂಘಟನೆಯ ತತ್ವಾದರ್ಶಗಳು ಹಾಗೂ ಆಚರಣೆಗಳು ಮುನ್ನಡೆಯ ಹಾದಿಯಲ್ಲಿ ಸಾಗಬೇಕೆಂಬುದೇ ಈ ಹಿರಿಯರ ಅಭಿಲಾಷೆ. ತಮ್ಮಂತಹ ವಯೋವೃದ್ಧರಿಂದ ಹಿಡಿದು ಬಸವನಗುಡಿ ಬ್ರಹ್ಮ ಸಮಾಜದ ಸಭೆಗಳಿಗೆ ತಪ್ಪದೆ ಹಾಜರಾಗುವ ಆರೇಳು ವರ್ಷ ವಯಸ್ಸಿನ ಬಾಲಕ ಸಾಜನ್‌ನಂತಹ ಅತ್ಯಂತ ಕಿರಿಯ ಬ್ರಹ್ಮೋ ಸದಸ್ಯರೆಲ್ಲರೂ ಈ ನಿಟ್ಟಿನಲ್ಲಿ ಪ್ರಯತ್ನಿಸುತ್ತಿರುವುದು ಇವರಿಗೆ ಸಂತೋಷದ ಸಂಗತಿ. ಇವರು 'ಇಂಟರ್‌ನ್ಯಾಷನಲ್ ಅಸೋಸಿಯೇಷನ್ ಫಾರ್ ರಿಲಿಜಿಯಸ್ ಫ್ರೀಡಮ್' ಎಂಬ ರಾಷ್ಟ್ರೀಯ ಸಂಘಟನೆಯ ಸಂಸ್ಥಾಪಕ ಕಾರ್ಯದರ್ಶಿಯೂ ಹೌದು. ಅದರ ಸುಮಾರು 10 ಅಂತರಾಷ್ಟ್ರೀಯ ಸಮ್ಮೇಳನಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿರುವ ಕೀರ್ತಿ ಅವರದು. ಇಲ್ಲಿನ ಬ್ರಹ್ಮ ಸಮಾಜಕ್ಕೆ ಪುರುಷರಷ್ಟೇ ಅಲ್ಲದೆ ಮಹಿಳೆಯರೂ ಅಮೂಲ್ಯ ಕೊಡುಗೆ ನೀಡಿದ್ದಾರೆ. ಅವರಲ್ಲಿ ಮುಖ್ಯರಾದವರು ನಳಿನಿ ಸತೀಶ್‌ಚಂದ್ರ. ಮೊದಲು ಮಂಗಳೂರು ಬ್ರಹ್ಮ ಸಮಾಜದಲ್ಲಿ ಕಾರ್ಯನಿರ್ವಹಿಸುತ್ತಿದ್ದರು. ಆ ಊರಿನ ಕಾಫಿ ಬೋರ್ಡ್‌ನಲ್ಲಿ ಹಿರಿಯ ಅಧಿಕಾರಿಯಾಗಿದ್ದ ಪತಿ ಬೆಂಗಳೂರಿಗೆ ವರ್ಗವಾಗಿ ಬಂದಾಗ ಅವರೊಂದಿಗೆ ತಾವೂ ಆಗಮಿಸಿ ಇಲ್ಲಿನ ಈ ಸಂಘಟನೆಯ ಕಾರ್ಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಸದಸ್ಯರ ಮನೆಗಳಲ್ಲಿ ಮದುವೆ ನಾಮಕರಣ ಮುಂತಾದ ಕಾರ್ಯಕ್ರಮಗಳಾದಾಗ ಅದನ್ನು ಈ ಸಂಘಟನೆಯ ರೀತಿರಿವಾಜಿನ ಪ್ರಕಾರ ನಡೆಸಿಕೊಡುವ ಆಧ್ವರ್ಯುಗಳಾಗಿರುತ್ತಿದ್ದರು. ಚಿಂತನಾ ಸಭೆಗಳಾದಾಗಲೂ ಸಂಪೂರ್ಣ ತಯಾರಿ ಮಾಡಿಕೊಂಡು ಬಂದು ಇವರು ನೀಡುತ್ತಿದ್ದ ಉಪನ್ಯಾಸಗಳು ಹಿರಿಕಿರಿ ಸದಸ್ಯರೆಲ್ಲರ ಗಮನ ಸೆಳೆಯುತ್ತಿತ್ತು. ಕಂಟೋನ್ಮೆಂಟ್ ಬ್ರಹ್ಮ ಸಮಾಜದ ಅಧ್ಯಕ್ಷರಾಗಿಯೂ ಇವರು ಕಾರ್ಯನಿರ್ವಹಿಸಿದ್ದಾರೆ. ಅವರ ಮಗ ಭಾರತೀಯ ನೌಕಾ ಪಡೆಯಲ್ಲಿ ಹಿರಿಯ ಅಧಿಕಾರಿಯಾಗಿ ದೆಹಲಿಯಲ್ಲೇ ನೆಲೆಸಿದ್ದಾರೆ. ಪ್ರಸ್ತುತ ನಳಿನಿಯವರು ಮಗನೊಂದಿಗೆ ಇದ್ದಾರೆ. ಆದರೂ ಬೆಂಗಳೂರಿನ ತಮ್ಮ ಸೇವಾ ಅವಧಿಯನ್ನು ಸ್ಮರಿಸಿಕೊಳ್ಳುತ್ತಾರೆ.

ನಮ್ಮ ನಾಡಿನ ಪ್ರಸಿದ್ಧ ವಿದ್ವಾಂಸರಾಗಿದ್ದ ಪ್ರೊ। ಎಸ್.ಕೆ.ರಾಮಚಂದ್ರ ರಾಯರು ಈ ಸಂಘಟನೆಗೆ 2 ಉಪಯುಕ್ತ ಕೃತಿಗಳ ಮೂಲಕ ಕೊಡುಗೆ ನೀಡಿದ್ದಾರೆ. 1999ರಲ್ಲಿ ಇವರಿಂದ ರಚಿಸಲ್ಪಟ್ಟ ಕೃತಿ ಬ್ರಹ್ಮೋಪಾಸನೆ. ರಾಮಚಂದ್ರರಾಯರು ಬ್ರಾಹ್ಮಧರ್ಮವೆಂಬ ಗ್ರಂಥವನ್ನು ಬಂಗಾಳಿಯಲ್ಲಿ 1965ರ ವೇಳೆಗೇ ಓದಿದ್ದರು. ಅದು ಅವರ ಮನಸ್ಸಿನ ಮೇಲೆ ಬಲವಾದ ಪರಿಣಾಮ ಬೀರಿತ್ತು. ಇದು ನನಗೆ ಪ್ರಿಯವಾದ ಗ್ರಂಥ. ಇದನ್ನು ಕನ್ನಡಕ್ಕೆ ಅನುವಾದ ಮಾಡಬೇಕೆಂಬ ಬಯಕೆ ಬಹು ಕಾಲದಿಂದ ಇತ್ತು ಎಂದಿದ್ದಾರೆ ಅವರು. ಇವರ ಮಿತ್ರರೂ, ಪೂಡೆ ಸಂಸ್ಥೆಯ ಹಿರಿಯರೂ ಆದ ಡಬ್ಲ್ಯೂ.ಎಚ್.ಪುಟ್ಟಯ್ಯ ಮತ್ತು ಅವರ ಪುತ್ರ ಡಬ್ಲ್ಯೂ.ಪಿ.ಕೃಷ್ಣ ರವರು, ಇವರನ್ನು ಆ ಕೃತಿಯ ಕನ್ನಡಾನುವಾದವನ್ನು ರಚಿಸಿಕೊಡಬೇಕೆಂದು ಕೋರಿದರು. ಹಾಗೆಯೇ ರಾಮಚಂದ್ರ ರಾಯರು ರಚಿಸಿದ ಬ್ರಾಹ್ಮಧರ್ಮ-ತತ್ವ ಸ್ತೋತ್ರ-ಗೀತ ಎಂಬ ಇನ್ನೊಂದು ಕೃತಿಯು ಮರುವರ್ಷವೇ ಪ್ರಕಟಿಸಲ್ಪಟ್ಟಿತು. 1999ರಲ್ಲಿ ಬೆಂಗಳೂರಿನ ಬ್ರಹ್ಮ ಸಮಾಜದ ಮಾಘೋತ್ಸವದ ಸಂದರ್ಭದಲ್ಲಿ ಇವರ ಬಂಗಾಳಿ ಮಿತ್ರರೂ, ಮಧುರ ಗಾಯಕರೂ ಆದ ಸುರ್ಜಿತ್ ರಾಯ್ ಮತ್ತು ಅರುಂಧತಿ ರಾಯ್ ಇವರಿಗೆ ಬ್ರಾಹ್ಮ ಸಂಗೀತ ಎಂಬ ಪುಸ್ತಕವನ್ನು ಕೊಡುಗೆಯಾಗಿ ನೀಡಿದ್ದರು. ಬ್ರಹ್ಮ ಸಮಾಜದ ಮಿಳಿತ ಉಪಾಸನ ಎಂಬ ಕಾರ್ಯಕ್ರಮದಲ್ಲಿ ಉದ್ಬೋಧನ ಎಂಬ ಹಂತಕ್ಕೆ ಮೊದಲು ಆರಾಧನೆಯ ಹಂತಕ್ಕೆ ಮುಂಚೆ ಸಾಧಾರಣ ಪ್ರಾರ್ಥನೆಯ ನಂತರ ಆಚಾರ್ಯರ ಉಪದೇಶವಾದ ಮೇಲೆ ಗೀತೆಗಳನ್ನು ಹಾಡುವ ಪದ್ಧತಿ ಇದೆ. ಇದಕ್ಕೆ ಬ್ರಾಹ್ಮ ಸಂಗೀತವೆಂದು ಹೆಸರು. ತಾರುಣ್ಯದಲ್ಲಿ ಬ್ರಹ್ಮ ಸಮಾಜಕ್ಕೆ ಸೇರಿದವರಾಗಿದ್ದ ಸ್ವಾಮಿ ವಿವೇಕಾನಂದರು ಬ್ರಾಹ್ಮ ಸಂಗೀತದಲ್ಲಿ ಪಾಲ್ಗೊಳ್ಳುತ್ತಿದ್ದುದುಂಟು. ಇಂತಹ ಗಹನವಾದ ಗೀತೆಗಳಲ್ಲಿ ಕೆಲವನ್ನು ರಾಮಚಂದ್ರ ರಾಯರು ಆರಿಸಿಕೊಂಡು ಕನ್ನಡಿಸಿರುವುದಷ್ಟೇ ಅಲ್ಲದೆ ಬ್ರಾಹ್ಮಧರ್ಮದ ಹಿನ್ನೆಲೆ, ಬ್ರಾಹ್ಮ ಧರ್ಮದ ಮೂಲತತ್ವ ಎಂಬ ಪ್ರಬುದ್ಧ ಲೇಖನಗಳನ್ನೂ ಇದರಲ್ಲಿ ಬರೆದಿದ್ದಾರೆ. ಈ ಎರಡೂ ಕೃತಿಗಳು ನಾಡಿನ ಬ್ರಹ್ಮ ಸಮಾಜ ಮತ್ತು ಕನ್ನಡ ಸಾಹಿತ್ಯಕ್ಕೆ ನೀಡಿದ ಅಮೂಲ್ಯ ಕೊಡುಗೆಗಳಾಗಿವೆ.

ಬೆಂಗಳೂರು ಸಂಘಟನೆಯ ಮತ್ತೊಂದು ಹೆಗ್ಗಳಿಕೆಯೆಂದರೆ 2007ರ ಡಿಸೆಂಬರ್ 28ರಿಂದ 30ರವರೆಗೆ ಅಖಿಲ ಭಾರತ ಬ್ರಾಹ್ಮ ಸಮ್ಮೇಳನವನ್ನು ಆಯೋಜಿಸಿರುವುದು. ಹಿಂದೆ ಈ ಸಮ್ಮೇಳನ 1968ರಲ್ಲಿ ಇಲ್ಲಿ ನಡೆದಿತ್ತು. ಮತ್ತೆ ನಾಲ್ಕು ದಶಕಗಳ ನಂತರ ನಡೆದ ಈ ಸಮ್ಮೇಳನದಲ್ಲಿ ರಾಷ್ಟ್ರದಾದ್ಯಂತ ಇರುವ 84 ಕೇಂದ್ರಗಳಿಂದ 200ಕ್ಕೂ ಹೆಚ್ಚು ಪ್ರತಿನಿಧಿಗಳು ಇದರಲ್ಲಿ ಭಾಗವಹಿಸಿದ್ದರು. ಬೆಂಗಳೂರು ವಿ.ವಿದ ಹಿರಿಯ ಪ್ರಾಧ್ಯಾಪಕರೂ, ಬ್ರಾಹ್ಮೋಗಳೂ ಆಗಿದ್ದ ಡಾ। ಜೀವನ್ ಕುಮಾರ್ ಇದನ್ನು ಉದ್ಘಾಟಿಸಿದ್ದರು. ಪೂನಾ ಪ್ರಾರ್ಥನಾ ಸಮಾಜದ ಡಾ। ಸುಷ್ಮಾ ಜೋಗ್ ಅಧಿವೇಶನ ಅಧ್ಯಕ್ಷತೆ ವಹಿಸಿದ್ದರು. ಪೂಡೆ.ಪಿ.ಕೃಷ್ಣರವರ ಸಂಪಾದಕತ್ವದಲ್ಲಿ ಹೊರತಂದ ಸಂಚಿಕೆಯನ್ನು ಈ ಸಮಯದಲ್ಲಿ ಬಿಡುಗಡೆ ಮಾಡಲಾಯಿತು. ಹೊರ ನಾಡಿನ ಪ್ರತಿನಿಧಿಗಳೆಲ್ಲ ಬೆಂಗಳೂರಿನ ಈ ಸಂಘಟನೆಯ ಸಾಧನೆಯನ್ನು ಪ್ರಶಂಸಿದರು. ಈ ಎಲ್ಲಾ ಕೇಂದ್ರಗಳ ನಡುವೆ ಉತ್ತಮ ಸಂಪರ್ಕವಿರಿಸಿಕೊಳ್ಳಲು ಒಂದು ವೆಬ್‌ಸೈಟನ್ನು ರೂಪಿಸಬೇಕೆಂಬ ವಿಚಾರವೂ ಈ ಸಂದರ್ಭದಲ್ಲಿ ಬಂತು. ಈ ಜವಾಬ್ದಾರಿಯನ್ನು ಸ್ವೀಕರಿಸಿದ ಬಸವನಗುಡಿ ಬ್ರಹ್ಮ ಸಮಾಜದ ಡಾ। ಅಶೋಕ್ ಗುರುದಾಸ್ ಈಗಾಗಲೇ ವೆಬ್‌ಸೈಟನ್ನು ರೂಪಿಸುವಲ್ಲಿ ಕಾರ್ಯನಿರತರಾಗಿದ್ದಾರೆ.

www.bangalorebrahmosamaj.com ಎಂಬ ವಿಳಾಸದ ವೆಬ್‌ಸೈಟ್ ಸದ್ಯದಲ್ಲೇ ಕಾರ್ಯನಿರತವಾಗಲಿದೆ. ಬೆಂಗಳೂರಿನ ಈ ಸಂಘಟನೆಯ ಎಲ್ಲ ವಿವರಗಳು ಮತ್ತು ಭಾರತದಲ್ಲಿ ಬ್ರಹ್ಮ ಸಮಾಜದ ವಿಚಾರ ವಿನಿಮಯಕ್ಕೂ ಇದು ಸೂಕ್ತ ವೇದಿಕೆಯಾಗಲಿದೆ. ಇದೂ ಬೆಂಗಳೂರಿನ ಬ್ರಹ್ಮ ಸಮಾಜದ ಒಂದು ಹೆಗ್ಗಳಿಕೆಯೇ. ಇಷ್ಟೆಲ್ಲ ಹೆಗ್ಗಳಿಕೆಗಳಿದ್ದರೂ ಈ ಸಂಘಟನೆಯ ಸದಸ್ಯರಿಗೆ ಬೇಸರ ತಂದಿರುವ ಒಂದು ಸಂಗತಿಯೂ ಉಂಟು. ಅರಳೇಪೇಟೆ ಕೇಂದ್ರವನ್ನು ಬೆಳೆಸಿದ ಬ್ರಹ್ಮಾನಂದ ಸ್ವಾಮಿಯವರ ಸಮಾಧಿ ಕಣ್ಮರೆಯಾದುದೇ ಇದಕ್ಕೆ ಕಾರಣ. ಈ ಸ್ವಾಮೀಜಿಯವರ ನಿಷ್ಠಾವಂತ ಅನುಯಾಯಿಗಳಾಗಿದ್ದ ನಿಶಾನೆ ಮಾರಪ್ಪ, ಬ್ರಹ್ಮಾನಂದ ಸ್ವಾಮಿಯವರು ನಿಧನರಾದ ಮೇಲೆ ಈಗಿನ ಬಿನ್ನಿ ಮಿಲ್ ಬಳಿಯ ತಮ್ಮ ಜಮೀನಿನಲ್ಲಿ ಅವರ ಸಮಾಧಿಯನ್ನು ನಿರ್ಮಿಸಿ ಸುಮಾರು ಮುಕ್ಕಾಲು ಎಕರೆ ಜಾಗವನ್ನು ಅದಕ್ಕಾಗಿ ಬಿಟ್ಟಿದ್ದರು. ಆನಂತರ ಆ ಪ್ರದೇಶವನ್ನು ಬಿನ್ನಿ ಮಿಲ್‌ಗೆ ಮಾರಿದಾಗ ಈ ಭಾಗವನ್ನು ಹಾಗೆಯೇ ಉಳಿಸಿಕೊಳ್ಳುವಂತೆ ಕರಾರು ಪತ್ರದಲ್ಲೂ ಸೂಚಿಸಿದ್ದರಂತೆ. ಆದರೆ ಇಂದು ಆ ಜಾಗದಲ್ಲೆಲ್ಲ ಕಟ್ಟಡಗಳು ಬಂದು ಸಮಾಧಿಯು ಕಣ್ಮರೆಯಾಗಿದೆ. ಒಟ್ಟಿನಲ್ಲಿ ಬೆಂಗಳೂರಿನ ಬ್ರಹ್ಮ ಸಮಾಜ ಭಾರತದ ಈ ಸಂಘಟನೆಯಲ್ಲಿ ತನ್ನದೇ ಆದ ಛಾಪನ್ನು ಮೂಡಿಸಿದೆ.

■ ಮುಗಿಯಿತು



ಹಿರಿಯ ಸದಸ್ಯರೊಂದಿಗೆ ನಳಿನಿ ಸತೀಶ್‌ಚಂದ್ರ




ಸ್ಮರಣ ಸಂಚಿಕೆ ಬಿಡುಗಡೆ

## ಉಪನಗರ ವಾರ್ತೆ



**ಯಲಹಂಕ ಶೇಷಾದ್ರಿಪುರಂ ಕಾಲೇಜಿನಲ್ಲಿ ರೆಡ್ ಕ್ರಾಸ್ ಸಂಸ್ಥೆಯ ಘಟಕ ಉದ್ಘಾಟಿಸಲಾಯಿತು. ಅಧ್ಯಕ್ಷ ಕೆ.ಎನ್. ನಂಜಪ್ಪ, ಎಸ್.ವಿ. ಮಂಜುನಾಥ್, ಡಾ.ಎಂ. ಪ್ರಕಾಶ್ ಭಾಗವಹಿಸಿದ್ದರು.**

# ರೆಡ್‌ಕ್ರಾಸ್ ಘಟಕದಲ್ಲಿ ದಾಖಲು

ಯಲಹಂಕ: ರೆಡ್‌ಕ್ರಾಸ್ ಘಟಕದಲ್ಲಿ ವಿದ್ಯಾರ್ಥಿಗಳನ್ನು ಹೆಚ್ಚಾಗಿ ದಾಖಲು ಮಾಡಿಕೊಳ್ಳಬೇಕು ಎಂದು ಸ್ವಾತಂತ್ರ್ಯ ಹೋರಾಟಗಾರ ಎಸ್.ವಿ. ಮಂಜುನಾಥ್ ಸಲಹೆ ಮಾಡಿದರು. ಇಲ್ಲಿನ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜ್‌ನಲ್ಲಿ ಹಮ್ಮಿಕೊಂಡಿದ್ದ ಯೂತ್ ರೆಡ್‌ಕ್ರಾಸ್ ಘಟಕ ಉದ್ಘಾಟಿಸಿ ಮಾತನಾಡಿದರು.

ರೆಡ್ ಕ್ರಾಸ್ ಸೊಸೈಟಿಯಲ್ಲಿ ಸದಸ್ಯರಾಗುವ ಮೂಲಕ ಅನೇಕ ಆರೋಗ್ಯ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಬಹುದು ಎಂದು ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಕೃಷ್ಣ ತಿಳಿಸಿದರು.

ಸಂಜೆವಾಣಿ
ಭಾನುವಾರ 24 ಫೆಬ್ರವರಿ 2008

# ಕುಂದಾಣದಲ್ಲಿ ಸೇವಾ ಶಿಬಿರ

ಬೆಂಗಳೂರು, ಫೆ. ೨೪- ಯಲಹಂಕದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜು ಆಶ್ರಯದಲ್ಲಿ ಫೆ. 25 ರಿಂದ ಮಾರ್ಚ್ 5 ರವರೆಗೆ ದೇವನಹಳ್ಳಿ ತಾಲ್ಲೂಕಿನ ಕುಂದಾಣ ಗ್ರಾಮದಲ್ಲಿ "ಆರೋಗ್ಯಕ್ಕಾಗಿ ಯುವ ಜನತೆ" ಎಂಬ ರಾಷ್ಟ್ರೀಯ ಸೇವಾ ಯೋಜನೆಯ ವಾರ್ಷಿಕ ಶಿಬಿರವನ್ನು ಹಮ್ಮಿಕೊಳ್ಳಲಾಗಿದೆ.

ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ರಾಜು ಚಂದ್ರಶೇಖರ್ ಈ ಕಾರ್ಯಕ್ರಮವನ್ನು ಉದ್ಘಾಟಿಸಲಿದ್ದು, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಕೆ.ಎಂ. ನಂಜಪ್ಪ ಅಧ್ಯಕ್ಷತೆ ವಹಿಸಲಿದ್ದಾರೆ.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಪ್ರಧಾನ ಕಾರ್ಯದರ್ಶಿ ವೂಡೇ. ಪಿ. ಕೃಷ್ಣ, ಬೆಂವಿವಿ ರಾ.ಸೇ.ಯೋ. ಸಂಯೋಜನಾಧಿಕಾರಿ ಡಾ. ಸಿ.ಜಿ. ಲಕ್ಷ್ಮೀಪತಿ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಉಪಾಧ್ಯಕ್ಷ ಎನ್. ಪಂಡಿತಾರಾಧ್ಯ ಮತ್ತಿತರರು ಮುಖ್ಯ ಅತಿಥಿಗಳಾಗಿ ಭಾಗವಹಿಸುವರು.

ನಗರದ ಮಿಥಿಕ್ ಸೊಸೈಟಿಯಲ್ಲಿ ಇಂದು ಸೇವಕ ಎಚ್.ಬಿ.ಎಸ್ ಆರಾಧ್ಯ ಅಭಿನಂದನಾ ಸಮಿತಿ ಹಮ್ಮಿಕೊಂಡಿದ್ದ ಕಾರ್ಯಕ್ರಮವನ್ನು ಶ್ರೀ ಬೇಲಿ ಮಠ ಶ್ರೀ ಶಿವರುದ್ರ ಮಹಾಸ್ವಾಮೀಜಿ ಉದ್ಘಾಟಿಸಿದರು. ಪ್ರೊ.ಟಿ.ಆರ್.ಮಹಾದೇವಯ್ಯ , ಪೂಡೆ ಪಿ.ಕೃಷ್ಣ ಮತ್ತಿತರರಿದ್ದರು.

ಸಂಜೆವಾಣಿ

ಶನಿವಾರ 23 ಫೆಬ್ರವರಿ 2008

# ನಿವೃತ್ತ ಉಪಆಯುಕ್ತ ಅಭಿನಂದನಾ ಸಮಾರಂಭ

ಬೆಂಗಳೂರು, ಫೆ. ೨೩- ಅರಳೆಪೇಟೆಯ ನಿಷ್ಠಾವಂತ ಸಮಾಜ ಸೇವಕ ಎಚ್.ಬಿ.ಎಸ್. ಆರಾಧ್ಯ ಅಭಿನಂದನಾ ಸಮಿತಿ ವತಿಯಿಂದ ಹಿರಿಯ ಸಮಾಜ ಸೇವಕ, ಬೆಂ.ಮ.ನ. ಪಾಲಿಕೆಯ ನಿವೃತ್ತ ಉಪಆಯುಕ್ತ ಎಚ್.ಬಿ.ಎಸ್. ಆರಾಧ್ಯ ಅಭಿನಂದನಾ ಸಮಾರಂಭವನ್ನು ಫೆ. 25ರಂದು ಬೆಳಗ್ಗೆ 10ಕ್ಕೆ ನಗರದ ಮಿಥಿಕ್ ಸೊಸೈಟಿ ಸಭಾಂಗಣದಲ್ಲಿ ಆಯೋಜಿಸಲಾಗಿದೆ.

ಬೇಲಿಮಠ ಮಹಾಸಂಸ್ಥಾನ ಮಠದ ಶಿವರುದ್ರ ಮಹಾಸ್ವಾಮಿಗಳ ದಿವ್ಯ ಸಾನಿಧ್ಯದಲ್ಲಿ ನಡೆಯಲಿರುವ ಈ ಕಾರ್ಯಕ್ರಮವನ್ನು ವೂಡೆ.ಪಿ. ಕೃಷ್ಣ ಉದ್ಘಾಟಿಸುತ್ತಿದ್ದು. ವಿಭೂತಿಪುರ ಮಠದ ಮಹಾಂತಲಿಂಗಶಿವಾಚಾರ್ಯ ಮಹಾಸ್ವಾಮಿ ಅಧ್ಯಕ್ಷತೆ ವಹಿಸಲಿದ್ದಾರೆ.

ಪ್ರೊ. ಟಿ.ಆರ್. ಮಹಾದೇವಯ್ಯ ಹಾಗೂ ಪ್ರೊ. ಸದಾಶಿವ ಮತ್ತು ಸೌಭಾಗ್ಯ ಈಶ್ವರಯ್ಯ ಮುಖ್ಯ ಅತಿಥಿಗಳಾಗಿ ಭಾಗವಹಿಸುತ್ತಿದ್ದಾರೆ.

ಇದೇ ಸಂದರ್ಭದಲ್ಲಿ ಮಾಜಿ ಮೇಯರ್ ಕೆ.ಎಚ್.ಎನ್. ಸಿಂಹರವರು ಅಭಿನಂದನಾ ಗ್ರಂಥವನ್ನು ಬಿಡುಗಡೆ ಮಾಡುತ್ತಿದ್ದು, ಮೈಸೂರಿನ ಶಾಂತಾ ಜಗದೀಶ್ ಹಾಗೂ ಬೆಂಗಳೂರಿನ ಕು. ಸೌಮ್ಯರವರಿಂದ ಸುಗಮ ಸಂಗೀತವನ್ನು ಆಯೋಜಿಸಲಾಗಿದೆ.

ಪ್ರಜಾವಾಣಿ

ಸೋಮವಾರ
18ನೇ ಫೆಬ್ರುವರಿ 2008



## ರಾಮರಾವ್ ಸಂಸ್ಮರಣೆ

ಬೆಂಗಳೂರಿನ ಕುಮಾರಕೃಪಾ ರಸ್ತೆಯ ಡಾ. ನಾ.ಸು.ಹರ್ಡೀಕರ್ ಭಾರತ ಸೇವಾದಲ ಶಾಲೆಯಲ್ಲಿ ಶನಿವಾರ ಸ್ವಾತಂತ್ರ್ಯ ಸೇನಾನಿ ಐ.ಎನ್.ಎ. ರಾಮರಾವ್ ಸಂಸ್ಮರಣೆ ನಡೆಯಿತು. ಸ್ವಾತಂತ್ರ್ಯ ಹೋರಾಟಗಾರ ಎಸ್.ವಿ. ಮಂಜುನಾಥ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ.ಕೃಷ್ಣ ಪಾಲ್ಗೊಂಡಿದ್ದರು.

ಉದಯವಾಣಿ
ಭಾನುವಾರ 17 ಫೆಬ್ರವರಿ 2008
ಸಿಲಿಕಾನ್ ಸಿಟಿ



ಸ್ವಾತಂತ್ರ್ಯ ಹೋರಾಟಗಾರ ಐ.ಎನ್.ಎ.ರಾಮ್‌ರಾವ್ ಸ್ಮರಣಾರ್ಥ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಹಾಗೂ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಶನಿವಾರ ಏರ್ಪಡಿಸಿದ್ದ ಸ್ವಯಂ ಪ್ರೇರಿತ ರಕ್ತದಾನ ಶಿಬಿರದಲ್ಲಿ ಭಾರತ ಸೇವಾದಲ ಪ್ರಧಾನ ಕಾರ್ಯದರ್ಶಿ ಯು.ಆರ್.ಸಭಾಪತಿ, ಕೋಶಾಧ್ಯಕ್ಷ ವೂಡೇ ಪಿ.ಕೃಷ್ಣ, ರೆಡ್‌ಕ್ರಾಸ್ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಸರೋಜ ಕೆ.ಎಂ.ನಂಜಪ್ಪ, ಪ್ರೊ|ಎಂ.ಆರ್.ಸಂತಾನಂ, ಡಾ| ಎನ್.ಜಿ.ನಾರಾಯಣ, ಎ.ಆರ್.ಶ್ರೀನಿವಾಸಯ್ಯ ಉಪಸ್ಥಿತರಿದ್ದರು.

ಪ್ರಜಾವಾಣಿ
ಭಾನುವಾರ 17ನೇ ಫೆಬ್ರುವರಿ 2008



ಸ್ವಾತಂತ್ರ್ಯ ಹೋರಾಟಗಾರ ಐ.ಎನ್.ಎ.ರಾಮರಾವ್ ಅವರ ಸ್ಮರಣಾರ್ಥ ಶೇಷಾದ್ರಿಪುರ ವಾಣಿಜ್ಯ ಮತ್ತು ನಿರ್ವಹಣಾ ಕಾಲೇಜಿನ ಆವರಣದಲ್ಲಿ ಶನಿವಾರ ನಡೆದ ಸ್ವಯಂ ರಕ್ತದಾನ ಶಿಬಿರದಲ್ಲಿ ಭಾರತ ಸೇವಾದಲದ ಪ್ರಧಾನ ಕಾರ್ಯದರ್ಶಿ ಯು.ಆರ್.ಸಭಾಪತಿ, ಕೋಶಾಧ್ಯಕ್ಷ ವೂಡೇ ಪಿ.ಕೃಷ್ಣ, ಕಾಲೇಜು ಪ್ರಾಂಶುಪಾಲ ಪ್ರೊ. ಎಂ.ಆರ್.ಸಂತಾನಂ, ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜೆ.ನಾರಾಯಣ, ಎ.ಆರ್.ಶ್ರೀನಿವಾಸಯ್ಯ, ಸರೋಜಾ ಕೆ.ಎಂ.ನಂಜಪ್ಪ ಪಾಲ್ಗೊಂಡಿದ್ದರು.

ಪ್ರಜಾವಾಣಿ ಚಿತ್ರ

ಸಂಜೆವಾಣಿ
ಭಾನುವಾರ 17 ಫೆಬ್ರವರಿ 2008



ಡಾ.ನಾ.ಸು. ಹರ್ಡೀಕರ್ ಭಾರತ ಸೇವಾದಳದ ಶಾಲೆಯಲ್ಲಿ ಇತ್ತೀಚೆಗೆ ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಎ.ಎ ನ್.ಎ. ರಾಮರಾವ್ ಸ್ಮರಣಾರ್ಥ ಸಭೆ ನಡೆಯಿತು. ಹಿರಿಯ ಸ್ವಾತಂತ್ರ ಹೋರಾಟಗಾರ ಎಸ್.ವಿ. ಮಂಜುನಾಥ, ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೇ. ಪಿ. ಕೃಷ್ಣ, ಭಾರತ ಸೇವಾದಳದ ಪ್ರಧಾನ ಕಾರ್ಯದರ್ಶಿ ಯು.ಆರ್. ಸಭಾಪತಿ ಹಾಗೂ ವಿದ್ಯಾರ್ಥಿಗಳು ಇದ್ದಾರೆ.



ಉಡುಪಿ ಅಜ್ಜರಕಾಡಿನ ಕ್ರೀಡಾಂಗಣದಲ್ಲಿ ಜರಗಿದ ಭಾರತ ಸೇವಾದಲದ ಕಾರ್ಯಕ್ರಮದಲ್ಲಿ ಪ್ರಾರ್ಥನೆಯನ್ನು ಸೇವಾದಲದ ಪ್ರಮುಖರು, ಅತಿಥಿಗಳು ಹಾಡುತ್ತಿರುವುದು.

# ಉಡುಪಿ ಅಜ್ಜರಕಾಡಿನಲ್ಲಿ ಸೇವಾದಲ ನಿನಾದ



ಶಿಸ್ತುಬದ್ಧವಾಗಿ ಕುಳಿತ ವಿದ್ಯಾರ್ಥಿ ಸಮೂಹ

ಉಡುಪಿ, ಫೆ.12: ಉಡುಪಿ ಅಜ್ಜರಕಾಡು ಕ್ರೀಡಾಂಗಣದಲ್ಲಿ ಫೆ.11ರಂದು ಭಾರತ ಸೇವಾದಲದ ರಾಜ್ಯ ಮಟ್ಟದ ರಾಷ್ಟ್ರೀಯ ಭಾವೈಕ್ಯ ಮಕ್ಕಳ ಮೇಳ ಆರಂಭಗೊಂಡಿದ್ದು ನಿರಂತರ ಶಾರೀರಿಕ ಕವಾಯತು, ಪಥಸಂಚಲನ, ಯೋಗಾಸನಗಳು ಪ್ರದರ್ಶನಗೊಳ್ಳುತ್ತಿವೆ.

ಇದರೊಂದಿಗೆ ಸೇವಾದಲದ ವಿಶೇಷ ಬ್ಯಾಂಡ್ ಸೆಟ್ ಅಲ್ಲದೆ ಐದು ಮಕ್ಕಳ ಸೆಟ್‌ಗಳ ಪೈಕಿ ಪ್ರದರ್ಶನಕ್ಕೆ ಆಯ್ಕೆಯಾದ ಎರಡು ಸೆಟ್‌ಗಳು ವಂದೇ ಮಾತರಂ, ಜನಗಣಮನದಂತಹ ದೇಶಭಕ್ತಿ ಗೀತೆಗಳನ್ನು ನುಡಿಸುತ್ತಿವೆ. ತಾಲೂಕು ಮಟ್ಟದಲ್ಲಿ ಆಯ್ಕೆಯಾದ ಶಾಲೆಗಳಿಂದ ಘಟಕಗಳು ಜಿಲ್ಲಾ ಮಟ್ಟದ ಮೇಳದಲ್ಲಿ ಪಾಲ್ಗೊಂಡಿದ್ದು ಜಿಲ್ಲಾ ಮಟ್ಟದಲ್ಲಿ ಆಯ್ಕೆಯಾದ ಶಾಲೆಗಳಿಂದ ಘಟಕಗಳು ಈಗ ರಾಜ್ಯ ಮಟ್ಟದ ಮೇಳದಲ್ಲಿ ಭಾಗವಹಿಸಿವೆ. ಫೆ.11ರಂದು ಒಟ್ಟು 84 ತಂಡಗಳಲ್ಲಿ ಶ್ರೇಷ್ಠ 24 ತಂಡಗಳನ್ನು ಆಯ್ಕೆ ಮಾಡಲಾಗಿದೆ. ಈ 24 ತಂಡಗಳಲ್ಲಿ ಮೂರು ತಂಡಗಳನ್ನು ಅಂತಿಮವಾಗಿ ಪ್ರಶಸ್ತಿಗೆ ಆಯ್ಕೆ ಮಾಡಲಾಗುವುದು.

ರಾಜ್ಯದ 28 ಜಿಲ್ಲೆಗಳ ಪ್ರತಿನಿಧಿಗಳು ಮೇಳದಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಒಟ್ಟು 2,874 ವಿದ್ಯಾರ್ಥಿಗಳು (1,436 ಹುಡುಗಿಯರು, 1,438 ಹುಡುಗರು), 28 ಜಿಲ್ಲಾ ಸಂಘಟಕರು, 192 ಶಾಖಾ ನಾಯಕರು (128 ಪುರುಷರು, 64 ಮಹಿಳೆಯರು), ಕೇಂದ್ರೀಯ ಸಮಿತಿಯ 36 ಪ್ರಮುಖರು, ಸ್ಥಳೀಯ ಸಮಿತಿಯ ಸದಸ್ಯರು ಪಾಲ್ಗೊಳ್ಳುತ್ತಿದ್ದಾರೆ. ಇವರಿಗೆ ಉಡುಪಿ ಆಸುಪಾಸಿನ 18 ಶಾಲೆಗಳಲ್ಲಿ ವಸತಿ ವ್ಯವಸ್ಥೆ ಪುರಭವನದಲ್ಲಿ ಊಟೋಪಚಾರದ ವ್ಯವಸ್ಥೆ ಮಾಡಲಾಗಿದೆ. ಫೆ.12ರಂದು ಮೇಳ ಉದ್ಘಾಟನೆಗೊಂಡಿದೆ. ಫೆ.13ರ ಬೆಳಗ್ಗೆ ಉಡುಪಿ ನಗರದಲ್ಲಿ ವಿದ್ಯಾರ್ಥಿಗಳ ಆಕರ್ಷಕ ಪಥಸಂಚಲನ ನಡೆಯಲಿದ್ದು ಸಂಜೆ ಸಮಾರೋಪ ಸಮಾರಂಭ ನಡೆಯಲಿದೆ. ರಾಜ್ಯದೆಲ್ಲೆಡೆಯಿಂದ ಬಂದ ಪ್ರತಿನಿಧಿಗಳು ಫೆ.14ರಂದು ನಿರ್ಗಮಿಸಲಿದ್ದಾರೆ.

ರಾಷ್ಟ್ರಧ್ವಜ ವಂದನೆ

ಸೋಮವಾರ ಬೆಳಗ್ಗೆ ನಡೆದ ರಾಷ್ಟ್ರಧ್ವಜ ವಂದನಾ ಕಾರ್ಯಕ್ರಮದಲ್ಲಿ ಜಿ.ಪಂ. ಅಧ್ಯಕ್ಷ ರಾಜು ಪೂಜಾರಿ, ಮಾಜಿ ಸಂಸದ ವಿನಯಕುಮಾರ ಸೊರಕೆ, ಸೇವಾದಲದ ಪ್ರಮುಖರಾದ ಯು.ಆರ್. ಸಭಾಪತಿ, ಭುಜಂಗ ಶೆಟ್ಟಿ, ಕೆ.ಸಿ.ರಾಜೇಶ್, ಡಿಡಿಪಿಐ ಕೆ.ಆನಂದ್ ಪಾಲ್ಗೊಂಡಿದ್ದರು.



ಸ್ವಾತಂತ್ರ್ಯ ಹೋರಾಟಗಾರ ಎಸ್.ವಿ. ಮಂಜುನಾಥ ಅವರು ಭಾರತ ಸೇವಾದಲದ ರಾಜ್ಯ ಮಟ್ಟದ ಮಕ್ಕಳ ಮೇಳವನ್ನು ಉದ್ಘಾಟಿಸುತ್ತಿರುವುದು.

# ಜಾತಿ ಕಲಹ, ಅಸ್ಪೃಶ್ಯತೆ, ಬಡತನ ನಿವಾರಣೆ

## ಭಾರತ ಸೇವಾದಲ ರಾಜ್ಯ ಮೇಳ ಉದ್ಘಾಟಿಸಿ ಎಸ್.ವಿ. ಮಂಜುನಾಥ್ ಕರೆ

ಉಡುಪಿ, ಫೆ.12: ಗಾಂಧೀಜಿಯವರ ಕನಸಾದ ಕೋಮು–ಜಾತಿ ಸೌಹಾರ್ದತೆಯನ್ನು ಕಾಪಾಡಿಕೊಂಡು, ಅಸ್ಪೃಶ್ಯತೆ ಮತ್ತು ಬಡತನವನ್ನು ಹೋಗಲಾಡಿಸಿದರೆ ರಾಷ್ಟ್ರೀಯ ಭಾವೈಕ್ಯತೆ ಸಾಧ್ಯವಾಗುತ್ತದೆ ಎಂದು ಹಿರಿಯ ಗಾಂಧೀವಾದಿ ಬೆಂಗಳೂರಿನ ಎಸ್.ವಿ. ಮಂಜುನಾಥ್ ಹೇಳಿದ್ದಾರೆ.

ಅಜ್ಜರಕಾಡು ಮೈದಾನದಲ್ಲಿ ಫೆ.12ರಂದು ಭಾರತ ಸೇವಾದಲದ ರಾಜ್ಯ ಮಟ್ಟದ ರಾಷ್ಟ್ರೀಯ ಭಾವೈಕ್ಯತಾ ಮಕ್ಕಳ ಮೇಳ–2008ನ್ನು ಉದ್ಘಾಟಿಸಿ ಮಾತನಾಡುತ್ತಿದ್ದ ಅವರು ಗಾಂಧೀಜಿಯವರು ಬಯಸಿದ ಏಕತೆ ಇಂದಿಗೂ ಆಗಿಲ್ಲ. ಜಾತಿ, ಮತಗಳನ್ನು ಮರೆತು ಭಾರತದ ಪ್ರಜೆಗಳು ನಾವು ಎಂಬ ಭಾವನೆ ಬರಬೇಕು. ಅಸ್ಪೃಶ್ಯತೆಯನ್ನು ಮನಸ್ಸಿನಿಂದ ಹೋಗಲಾಡಿಸಬೇಕು. ಬಡತನವನ್ನು ನಿವಾರಿಸಬೇಕು. ಸಾಮೂಹಿಕವಾಗಿ ಮತ್ತು ವೈಯಕ್ತಿಕವಾಗಿ ಭಾವೈಕ್ಯತೆಯ ಕೆಲಸ ನಡೆಯಬೇಕೆಂದು ಆಶಯ ವ್ಯಕ್ತಪಡಿಸಿದರು.

ವಿಧಾನ ಪರಿಷತ್ ಮಾಜಿ ಸಭಾಪತಿ ವಿ.ಆರ್. ಸುದರ್ಶನ್ ಅವರು ಪ್ರಜಾಪ್ರಭುತ್ವ, ಕೋಮು ಸೌಹಾರ್ದತೆಯನ್ನು ಬಲಪಡಿಸುವುದು ಇಂದಿನ ಅಗತ್ಯವಾಗಿದೆ ಎಂದರು.

ಜಾಗತೀಕರಣ ಮತ್ತು ಖಾಸಗೀಕರಣ ಗಾಂಧೀಜಿಯವರ ಚಿಂತನೆಗೆ ವಿರುದ್ಧವಾಗಿದೆ. ರಾಜಕೀಯ ಪಕ್ಷಗಳು ಮಾತ್ರ ಇವುಗಳಿಗೆ ಕಾರಣವಲ್ಲ. ಲೋಕದಲ್ಲಿ ಆಗುವ ವಿಚಾರಗಳು ರಾಜಕೀಯದ ಮೇಲೂ ಪರಿಣಾಮ ಬೀರುತ್ತದೆ. ಭಾರತ ಸೇವಾದಲ ರಾಜ್ಯಕ್ಕೆ ಮಾತ್ರ ಚಟುವಟಿಕೆಯನ್ನು ಸೀಮಿತಗೊಳಿಸದೆ, ಕೇಂದ್ರದಲ್ಲಿಯೂ ಗಾಂಧೀಜಿಯವರ ತತ್ವಾದರ್ಶಗಳನ್ನು ಪ್ರಸಾರ ಮಾಡಲು ಪ್ರಯತ್ನಿಸಬೇಕು. ಪ್ರಗತಿಪರ ವಿಚಾರಗಳ ಬಗೆಗೆ ಹೋರಾಟ ನಡೆಸಬೇಕು ಎಂದು ಸುದರ್ಶನ್ ಹೇಳಿದರು.

ಅಧ್ಯಕ್ಷತೆಯನ್ನು ಸೇವಾದಲ ಕೇಂದ್ರ ಸಮಿತಿ ಅಧ್ಯಕ್ಷ ಎಚ್.ಎಂ. ಗುರುಸ್ವಾಮಿ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಸೇವಾದಲದ ಕೋಶಾಧ್ಯಕ್ಷ ವೊಡೇ ಪಿ. ಕೃಷ್ಣ, ಮಾಜಿ ಸಚಿವರಾದ ಡಾ| ವಿ.ಎಸ್. ಆಚಾರ್ಯ, ವಸಂತ ಸಾಲ್ಯಾನ್, ಜಿ.ಪಂ. ಅಧ್ಯಕ್ಷ ರಾಜು ಪೂಜಾರಿ, ಮಾಜಿ ಸಂಸದ ವಿನಯಕುಮಾರ ಸೊರಕೆ, ಕ.ಸಾ.ಪ. ನಿಕಟಪೂರ್ವ ಅಧ್ಯಕ್ಷ ಹರಿಕೃಷ್ಣ ಪುನರೂರು, ಸ್ವಾತಂತ್ರ್ಯ ಹೋರಾಟಗಾರ ಬಿ. ಶಂಭು ಶೆಟ್ಟಿ ಶುಭ ಕೋರಿದರು.

### ಸಮ್ಮಾನ–ಪುಸ್ತಕ ಬಿಡುಗಡೆ

ಸೇವಾದಲದ ಉಪಾಧ್ಯಕ್ಷ ಶಿವಶರಣಪ್ಪ ವಾಲಿ, ಅಂಕಣಕಾರ ಸುರೇಶ ಮೂನ ಅವರನ್ನು ಸಮ್ಮಾನಿಸಲಾಯಿತು. ಭಾರತ ಸೇವಾದಲಕ್ಕೆ ಮಹತ್ವಪೂರ್ಣ ಸೇವೆ ಸಲ್ಲಿಸಿದ ಐ.ಎನ್.ಎ. ರಾಮ ರಾವ್ ಕುರಿತು ಬೇಲೂರು ಕೃಷ್ಣಮೂರ್ತಿ ಬರೆದ ಪುಸ್ತಕವನ್ನು ವಿ.ಆರ್. ಸುದರ್ಶನ್, ಭಾರತ ಸೇವಾದಲ ಕುರಿತು ಸುರೇಶ ಮೂನ ಬರೆದ ಪುಸ್ತಕವನ್ನು ಡಾ| ವಿ.ಎಸ್. ಆಚಾರ್ಯ, ಯು.ಆರ್. ಸಭಾಪತಿ ಅವರು ಬರೆದ ಯೋಗ ಶಿಕ್ಷಣ ಪುಸ್ತಕವನ್ನು ವಿನಯಕುಮಾರ ಸೊರಕೆ ಬಿಡುಗಡೆಗೊಳಿಸಿದರು.

ಸೇವಾದಲದ ಪ್ರಧಾನ ಕಾರ್ಯದರ್ಶಿ, ಸ್ವಾಗತ ಸಮಿತಿ ಕಾರ್ಯಾಧ್ಯಕ್ಷರಾದ ಕಾರ್ಯಕ್ರಮದ ರೂವಾರಿ ಯು.ಆರ್. ಸಭಾಪತಿ ಸ್ವಾಗತಿಸಿ ಪ್ರಸ್ತಾವನೆಗೈದರು. ಸಭೆಗೆ ಮುನ್ನ ನಡೆದ ಪಥಸಂಚಲನದಲ್ಲಿ ಎಚ್.ಎಂ. ಗುರುಸ್ವಾಮಿ ಗೌರವ ರಕ್ಷೆ ಸ್ವೀಕರಿಸಿದರು. ಪೆರೇಡ್ ಕಾರ್ಯಕ್ರಮವನ್ನು ಸ್ವಾಗತ ಸಮಿತಿ ಜಂಟಿ ಕಾರ್ಯದರ್ಶಿ ಆರೂರು ತಿಮ್ಮಪ್ಪ ಶೆಟ್ಟಿ, ಸಭಾ ಕಾರ್ಯಕ್ರಮವನ್ನು ಕಾರ್ಯದರ್ಶಿ ಕೆ.ಸಿ.ರಾಜೇಶ್, ಸೇವಾದಲ ಶಿಕ್ಷಣ ಸಂಸ್ಥೆ ಆಡಳಿತಾಧಿಕಾರಿ ವಿ.ಕೆ. ಉದ್ಯಾವರ್ ನಿರ್ವಹಿಸಿದರು.

ಮಂಜುನಾಥ ಅವರ ಪತ್ನಿ ಸುಶೀಲಮ್ಮ, ಸಂಘಟನಾ ಕಾರ್ಯದರ್ಶಿ ದೇವರಾಜ್, ಮಹಿಳಾ ಸಂಘಟನಾ ಕಾರ್ಯದರ್ಶಿ ಉಮಾ ಐ.ಬಿ. ಶಂಕರ್, ಸ್ವಾಗತ ಸಮಿತಿ ಪ್ರಧಾನ ಕಾರ್ಯದರ್ಶಿ ಬಿ. ಭುಜಂಗ ಶೆಟ್ಟಿ, ಪದಾಧಿಕಾರಿಗಳಾದ ಅಂಡಾರು ದೇವಿಪ್ರಸಾದ ಶೆಟ್ಟಿ, ನಡೂರು ಭೋಜ ಶೆಟ್ಟಿ, ಮೇಟಿ ಮುದಿಯಪ್ಪ, ಮಹಾಬಲ ಕುಂದರ್, ಉಪ್ಪುಂದ ಚಂದ್ರಶೇಖರ ಹೊಳ್ಳ, ಕಾರ್ಕಳದ ಗೋಪಾಲಕೃಷ್ಣ ಶೆಟ್ಟಿ, ಉಡುಪಿಯ ನಾಗೇಶ ರಾವ್, ಎಂ.ಎ. ಗಫೂರ್, ಅಲೆವೂರು ನಾಗರಾಜ್, ಜಯಶ್ರೀ ಕೃಷ್ಣರಾಜ್, ಡಿಡಿಪಿಐ ಕೆ. ಆನಂದ್, ಬಿಇಒಗಳಾದ ಡಿ. ಮಂಜುನಾಥಯ್ಯ, ಮಹಾಬಲ ಶೆಟ್ಟಿ ಉಪಸ್ಥಿತರಿದ್ದರು. ಸಂಜೆ ಸಾಂಸ್ಕೃತಿಕ ಕಾರ್ಯಕ್ರಮಗಳು ಜರಗಿದವು.

### ಮಕ್ಕಳಿಗೆ ರಕ್ಷಣೆ ನೀಡಿದ ಚಪ್ಪರ

ಭಾರತ ಸೇವಾದಲದ ಮಕ್ಕಳ ಮೇಳದಲ್ಲಿ ಮಕ್ಕಳಿಗೆ ಬಿಸಿಲ ಬಾಧೆ ತಟ್ಟಬಾರದು ಎಂಬ ಕಾರಣಕ್ಕೆ ಇದೇ ಪ್ರಥಮ ಬಾರಿಗೆ ಅಜ್ಜರಕಾಡು ಮೈದಾನದಲ್ಲಿ ವಿಶಾಲ ಚಪ್ಪರವನ್ನು ನಿರ್ಮಿಸಲಾಗಿತ್ತು. ಹಠಾತ್ ಮಳೆ ಬಂದ ಕಾರಣ ಮಳೆಯಿಂದ ರಕ್ಷಿಸಿಕೊಳ್ಳಲು ಚಪ್ಪರ ಅನುಕೂಲವಾಯಿತು. 11ರಿಂದ 15 ವರ್ಷದೊಳಗಿನ 2,874 ಮಕ್ಕಳು, 192 ಶಾಖಾ ನಾಯಕರು, 28 ಜಿಲ್ಲಾ ಸಂಘಟಕರು, ಬ್ಯಾಂಡ್ ಸೆಟ್, ಕೇಂದ್ರ ಸಮಿತಿ, ಸ್ವಾಗತ ಸಮಿತಿ ಪದಾಧಿಕಾರಿಗಳು, ಸ್ಥಳೀಯ ಮಕ್ಕಳು ಪಾಲ್ಗೊಂಡಿದ್ದರು.

■ ಉಡುಪಿಯಲ್ಲಿ ರಾಜ್ಯಮಟ್ಟದ ಭಾರತ ಸೇವಾದಲ ರಾಷ್ಟ್ರೀಯ ಭಾವೈಕ್ಯತಾ ಶಿಬಿರ ಉದ್ಘಾಟನೆ

# 'ಗಾಂಧಿಸೂತ್ರ ಪಾಲನೆಯಾಗದೆ ಭಾವೈಕ್ಯತೆಗೆ ತೊಡಕು'


ಮೇಳವನ್ನು ಸ್ವಾತಂತ್ರ್ಯ ಹೋರಾಟಗಾರ ಮಂಜುನಾಥ ಉದ್ಘಾಟಿಸಿದರು.

ಕನ್ನಡಪ್ರಭ ವಾರ್ತೆ, ಉಡುಪಿ, ಫೆ.12

ಕೋಮುವಾದ ಮತ್ತು ಜಾತಿವಾದ ನಿವಾರಣೆಗೆ ಗಾಂಧೀಜಿಯವರ ಸೂತ್ರ ಇನ್ನೂ ಪಾಲನೆಯಾಗದಿರುವುದು ನಮ್ಮ ದೇಶದ ರಾಷ್ಟ್ರೀಯ ಭಾವೈಕ್ಯತೆಗೆ ಬಹುದೊಡ್ಡ ತೊಡಕಾಗಿದೆ ಎಂದು ಹಿರಿಯ ಗಾಂಧಿವಾದಿ, ಸ್ವಾತಂತ್ರ್ಯ ಹೋರಾಟಗಾರ ಎಸ್.ವಿ. ಮಂಜುನಾಥ ಅಭಿಪ್ರಾಯಪಟ್ಟರು.

ಮಂಗಳವಾರ ಉಡುಪಿಯ ಅಜ್ಜರಕಾಡು ಗಾಂಧಿ ಮೈದಾನದಲ್ಲಿ ಭಾರತ ಸೇವಾದಲ ರಾಜ್ಯ ಮಟ್ಟದ ರಾಷ್ಟ್ರೀಯ ಭಾವೈಕ್ಯತಾ ಶಿಬಿರ ಉದ್ಘಾಟಿಸಿ ಅವರು ಮಾತನಾಡಿದರು.

ಕೋಮುವಾದ ಮತ್ತು ಜಾತಿವಾದಗಳು ನಮ್ಮ ದೇಶವನ್ನು ಹರಿದು, ಹಂಚಿ ಹಾಕುತ್ತವೆ. 'ನಾನು ಈ ದೇಶದ ಪ್ರಜೆ" ಎಂದು ಹೆಮ್ಮೆಯಿಂದ ಹೇಳಲು ಈ ವಾದಗಳು ಅಡ್ಡಿಯಾಗುತ್ತಿವೆ. ಸ್ವಾತಂತ್ರ್ಯ ಸಿಕ್ಕಿ ಇಷ್ಟು ವರ್ಷಗಳಾದರೂ ಅಸ್ಪೃಶ್ಯತೆ ತೊಲಗಿಲ್ಲ ಎಂದು ವಿಷಾಧಿಸಿದ ಅವರು, ಅಸ್ಪೃಶ್ಯತೆ–ದೈಹಿಕವಾಗಿ ಮಾತ್ರವಲ್ಲ, ಮಾನಸಿಕವಾಗಿಯೂ ತೊಲಗಬೇಕು. ಇದನ್ನು ಮಕ್ಕಳ ಶಿಕ್ಷಣ ಹಂತದಲ್ಲಿಯೇ ಕಲಿಸಬೇಕಾಗುತ್ತದೆ ಎಂದರು.

ಮುಖ್ಯ ಅತಿಥಿ, ಮಾಜಿ ಸಭಾಪತಿ ವಿ.ಆರ್. ಸುದರ್ಶನ್ ಅವರು 'ಐಎನ್‌ಎ ರಾಮರಾವ್' ಎಂಬ ಕೃತಿ ಬಿಡುಗಡೆಗೊಳಿಸಿ, ಪರಸ್ಪರ ಭಾಷೆ, ಧರ್ಮಗಳನ್ನು ಗೌರವಿಸುವುದರ ಮೂಲಕ ಮಾತ್ರ ರಷ್ಟ್ರೀಯ ಭಾವೈಕ್ಯತೆ ಸಾಧ್ಯ ಎಂದರು.

ರಾಜಕೀಯ ರಂಗ ಅಧೋಗತಿಗೆ ಇಳಿಯುವುದಕ್ಕೆ ಕೇವಲ ರಾಜಕಾರಣಿಗಳಷ್ಟೇ ಕಾರಣರಲ್ಲ. ಅವರ ಸುತ್ತ ಇರುವ ಸಮಾಜ, ಅಲ್ಲಿನ ಆಗುಹೋಗುಗಳು ಅವರ ಮೇಲೆ ಸದಾ ಪರಿಣಾಮ ಬೀರುತ್ತವೆ. ಆದ್ದರಿಂದ ಸಮಾಜ ಕೂಡ ಬದಲಾಗಬೇಕು. ರಾಜಕಾರಣಿಗಳ ಮೇಲೆ ಸಮಾಜ ಉತ್ತಮ ಪರಿಣಾಮ ಬೀರಬೇಕು ಎಂದು ಸುದರ್ಶನ್ ಹೇಳಿದರು.

'ಭಾರತ ಸೇವಾದಲ ನಡೆದು ಬಂದ ದಾರಿ' ಕೃತಿಯನ್ನು ಅನಾವರಣಗೊಳಿಸಿದ ಮಾಜಿ ಸಚಿವ ಡಾ|ವಿ.ಎಸ್. ಆಚಾರ್ಯ, ವಿದ್ಯಾರ್ಥಿಗಳು ದೇವಾಭಿಮಾನ, ಸಮಾಜಾಭಿಮಾನ ಮತ್ತು ದೇಶಾಭಿಮಾನಗಳನ್ನು ಬೆಳೆಸಿಕೊಳ್ಳಬೇಕು ಎಂದು ಕರೆ ನೀಡಿದರು.

ಅಧ್ಯಕ್ಷತೆ ವಹಿಸಿದ್ದ ಭಾರತ ಸೇವಾದಲದ ಕೇಂದ್ರ ಸಮಿತಿ ಅಧ್ಯಕ್ಷ ಎಚ್.ಎಂ. ಗುರುಸಿದ್ಧಸ್ವಾಮಿ, ಸೇವಾದಲ ಸಾಧನೆಗಳನ್ನು ವಿವರಿಸಿದರು. ಸೇವಾದಲದ ಕೋಶಾಧ್ಯಕ್ಷ ವೂಡೇ ಪಿ. ಕೃಷ್ಣ, ಜಿ.ಪಂ. ಅಧ್ಯಕ್ಷ ರಾಜು ಪೂಜಾರಿ, ಮಾಜಿ ಸಚಿವ ವಸಂತ ಸಾಲ್ಯಾನ್, ಮಾಜಿ ಸಂಸದ ವಿನಯಕುಮಾರ್ ಸೊರಕೆ ವೇದಿಕೆಯಲ್ಲಿದ್ದರು.

ಭಾರತ ಸೇವಾದಲ ಉಪಾಧ್ಯಕ್ಷ ಶಿಲಶರಣಪ್ಪ ವಾಲಿ ಅವರಿಗೆ 'ಡಾ|ಎಂ.ಸಿ. ಮೋದಿ ಸ್ಮಾರಕ ಪ್ರಶಸ್ತಿ' ಪ್ರದಾನ ಮಾಡಲಾಯಿತು. ಈ ಸಂದರ್ಭ ಬೆಂಗಳೂರಿನ ಆರಂಭ ಸಂಸ್ಥೆಯ ನಿರ್ದೇಶಕ ಸುರೇಶ್ ಮೂನ ಅವರನ್ನು ಸನ್ಮಾನಿಸಲಾಯಿತು.

ಸೇವಾದಲದ ಪ್ರಧಾನ ಕಾರ್ಯದರ್ಶಿ ಯು.ಆರ್. ಸಭಾಪತಿ ಸ್ವಾಗತಿಸಿದರು. ಮೇಳದ ಸ್ವಾಗತ ಸಮಿತಿಯ ಜಂಟಿ ಕಾರ್ಯದರ್ಶಿ ಆರೂರು ತಿಮ್ಮಪ್ಪ ಶೆಟ್ಟಿ ಪೆರೇಡ್ ನಿರೂಪಿಸಿದರು. ವೇದಿಕೆಯ ಕಾರ್ಯಕ್ರಮವನ್ನು ಸೇವಾದಲ ಆಡಳಿತಾಧಿಕಾರಿ ವಿ.ಕೆ. ಉದ್ಯಾವರ ನಿರೂಪಿಸಿದರು. ಸ್ವಾಗತ ಸಮಿತಿ ಕಾರ್ಯದರ್ಶಿ ಕೆ.ಸಿ. ರಾಜೇಶ್ ವಂದಿಸಿದರು.

## ಸೇವಾದಲದಲ್ಲಿ ಏನೇನು

■ ಬುಧವಾರ ಸೇವಾದಲದ 4 ಸಾವಿರ ಸ್ವಯಂ ಸೇವಕರು ಉಡುಪಿ ನಗರ ಪಥಸಂಚಲನ ನಡೆಸಲಿದ್ದಾರೆ. ಈ ಕಾರ್ಯಕ್ರಮವನ್ನು ಬೆಳಗ್ಗೆ 9.30ಕ್ಕೆ ಪೊಲೀಸ್ ವರಿಷ್ಠಾಧಿಕಾರಿ ದೇವಜ್ಯೋತಿ ರಾಯ್ ಉದ್ಘಾಟಿಸಲಿದ್ದಾರೆ. ಸುಮಾರು 4 ಗಂಟೆ ಕಾಲ ನಗರದ ಎಲ್ಲ ರಸ್ತೆಗಳಲ್ಲಿ ನಡೆಯುವ ಈ ಆತ್ಯಾಕರ್ಷಕ ಪಥಸಂಚಲನದಲ್ಲಿ 10ಕ್ಕೂ ಹೆಚ್ಚು ಬ್ಯಾಂಡ್ ತಂಡಗಳು ಭಾಗವಹಿಸಲಿವೆ.

■ ಉಡುಪಿಯಲ್ಲೀಗ ಬಿಸಿಲಿನ ಹೊಡೆತ ತೀವ್ರವಾಗಿರುವುದರಿಂದ ಮೇಳದಲ್ಲಿ ಭಾಗವಹಿಸಿದ್ದ ಮಕ್ಕಳ ಚಟುವಟಿಕೆಗಳಿಗೆ ನೆರಳು ಒದಗಿಸಲು ಮೈದಾನದಲ್ಲಿ ಶಾಮಿಯಾನ ಹಾಕಲಾಗಿದೆ. ಮಂಗಳವಾರ ಬೆಳಗ್ಗೆ 9 ಗಂಟೆಗೆ ಅನಿರೀಕ್ಷಿತವಾಗಿ ಸುರಿದ ಮಳೆಯಿಂದಲೂ ಮಕ್ಕಳು (ಬಿಸಿಲಿಗಾಗಿ ಹಾಕಿದ ಈ ಶಾಮಿಯಾನದಿಂದಾಗಿ)ಬಚಾವಾದರು.



ಅಜ್ಜರಕಾಡು ಮೈದಾನದಲ್ಲಿ ನಡೆಯುವ ಜಿಲ್ಲಾಡಳಿತದ ಸ್ವಾತಂತ್ರ್ಯೋತ್ಸವ/ ಗಣರಾಜ್ಯೋತ್ಸವ ಸಂದರ್ಭ ನಡೆಯುವ ಪಥಸಂಚಲನಕ್ಕಿಂತ ಮಂಗಳವಾರ ನಡೆದ ಸೇವಾದಲದ ಪೆರೇಡ್ ಅತ್ಯದ್ಭುತವಾಗಿತ್ತು.

—ಮಾಜಿ ಸೈನಿಕ ಆರ್. ಎಲ್. ಡಯಾಸ್

ಮದುಮಗ ಕೈಕೊಟ್ಟರೆ ಮದುವೆ ನಿಲ್ಲಬಾರದು ಅಂತ, ಇದ್ದವರಲ್ಲಿ ಯಾರಾದರೂ ಗಂಡಿನಿಂದ ತಾಳಿಕಟ್ಟುವ ಸಂಪ್ರದಾಯ ನಮ್ಮಲ್ಲಿದೆ. ಇಲ್ಲಿಯೂ ಮದುವೆಯ ಗಂಡು (ಮೇಳದ ಉದ್ಘಾಟಕ ಬಿ.ಕೆ. ಹರಿಪ್ರಸಾದ್) ಬಾರದೆ ಇದ್ದುದರಿಂದ ಮದುವೆಗೆ ಬಂದಿದ್ದ ನನ್ನನ್ನೇ ಮದುಮಗನ್ನಾಗಿ ಮಾಡಿದ್ದಾರೆ.

— ಮೇಳ ಉದ್ಘಾಟಿಸಿದ ಗಾಂಧಿವಾದಿ ಎಸ್. ವಿ. ಮಂಜುನಾಥ

ಕ. ಪ್ರ ಅಧ್ಯಕ್ಷತೆ ವಹಿಸುವರು.

# ರಾಷ್ಟ್ರೀಯ ಭಾವೈಕ್ಯ ಮಕ್ಕಳ ಮೇಳ ಉದ್ಘಾಟನೆ

**ವಿಕ ಸುದ್ದಿಲೋಕ**

ಉಡುಪಿ: ಕೋಮುವಾರು ಐಕ್ಯತೆ ಮೂಡಿ, ಅಸ್ಪೃಶ್ಯತೆ-ಬಡತನ ನಿವಾರಣೆಯಾಗದ ಹೊರತು ರಾಷ್ಟ್ರೀಯ ಭಾವೈಕ್ಯತೆ ಮೂಡದು ಎಂದು ಸ್ವಾತಂತ್ರ್ಯ ಹೋರಾಟಗಾರ, ಭಾರತ ಸೇವಾದಲ ಕೇಂದ್ರ ಸಮಿತಿ ಮಾರ್ಗದರ್ಶಕ ಎಸ್.ವಿ. ಮಂಜುನಾಥ್ ಹೇಳಿದ್ದಾರೆ.

ಅವರು ಮಂಗಳವಾರ ಅಜ್ಜರಕಾಡು ಮಹಾತ್ಮ ಗಾಂಧಿ ಜಿಲ್ಲಾ ಕ್ರೀಡಾಂಗಣದ ಡಾ. ನಾ. ಸು. ಹರ್ಡೀಕರ್ ವೇದಿಕೆಯಲ್ಲಿ ಭಾರತ ಸೇವಾದಲದ ರಾಜ್ಯಮಟ್ಟದ ಎರಡು ದಿನಗಳ ರಾಷ್ಟ್ರೀಯ ಭಾವೈಕ್ಯ ಮಕ್ಕಳ ಮೇಳವನ್ನು ಉದ್ಘಾಟಿಸಿ ಮಾತನಾಡಿದರು.

ವಿಧಾನ ಪರಿಷತ್ ಮಾಜಿ ಸಭಾಪತಿ ವಿ. ಆರ್. ಸುದರ್ಶನ್, ಮಾಜಿ ಸಚಿವ ಡಾ. ವಿ. ಎಸ್. ಆಚಾರ್ಯ, ಮಾಜಿ ಸಂಸದ ವಿನಯ ಕುಮಾರ್ ಸೊರಕೆ ಕೃತಿ ಬಿಡುಗಡೆ ಮಾಡಿದರು. ಭಾರತ ಸೇವಾದಲದ ಕೇಂದ್ರ ಸಮಿತಿ ಅಧ್ಯಕ್ಷ ಎಚ್. ಎಂ. ಗುರುಸಿದ್ಧಸ್ವಾಮಿ ಅಧ್ಯಕ್ಷತೆ ವಹಿಸಿದ್ದರು.

ಜಿ.ಪಂ. ಅಧ್ಯಕ್ಷ ರಾಜು ಪೂಜಾರಿ, ಮಾಜಿ ಸಚಿವ ವಸಂತವಿ. ಸಾಲ್ಯಾನ್, ಕೆ. ಆನಂದ, ಮಂಜುನಾಥಯ್ಯ, ವಸಂತ ಕುಮಾರ್ ಶೆಟ್ಟಿ ಟಿ. ಶಂಭು ಶೆಟ್ಟಿ ಹರಿಕೃಷ್ಣ ಪುನರೂರು, ಭಾರತ ಸೇವಾ ದಲದ ಕೋಶಾಧ್ಯಕ್ಷ ಪೂಡೇ ಪಿ. ಕೃಷ್ಣ ಉಪಸ್ಥಿತರಿದ್ದರು.

ಭಾರತ ಸೇವಾದಲ ಕೇಂದ್ರ ಸಮಿತಿ ಉಪಾಧ್ಯಕ್ಷ ಶಿವಶರಣಪ್ಪ ವಾಲಿ, ಆರಂಭ ಸಂಸ್ಥೆಯ ನಿರ್ದೇಶಕ ಸುರೇಶ್ ಮೂನ ಅವರಿಗೆ ಡಾ. ಎಂ. ಸಿ. ಮೋದಿ ಸ್ಮಾರಕ ಪುರಸ್ಕಾರ ನೀಡಲಾಯಿತು. ಸೇವಾ ದಲದ ಪ್ರಧಾನ ಕಾರ್ಯದರ್ಶಿ ಯು. ಆರ್. ಸಭಾಪತಿ ಪ್ರಾಸ್ತಾವಿಕ ಮಾತುಗಳನ್ನಾಡಿದರು.

13-2-08

ವಾರ್ತಾ ಭಾರತಿ 9-2-08

# ರಾಜ್ಯಮಟ್ಟದ ರಾ. ಭಾವೈಕ್ಯ ಮಕ್ಕಳ ಮೇಳಕ್ಕೆ ಭರದ ಸಿದ್ಧತೆ

ಉಡುಪಿ, ಫೆ.8: ಇದೇ ಫೆ.11ರಿಂದ 14ರವರೆಗೆ ಉಡುಪಿ ಅಜ್ಜರಕಾಡಿನ ಮಹಾತ್ಮಾ ಗಾಂಧಿ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆಯಲಿರುವ ಭಾರತ ಸೇವಾದಲದ ರಾಜ್ಯ ಮಟ್ಟದ ಭಾವೈಕ್ಯತಾ ಮಕ್ಕಳ ಮೇಳಕ್ಕಾಗಿ ಪೂರ್ವಭಾವಿ ಸಿದ್ಧತೆಗಳು ಭರದಿಂದ ನಡೆಯುತ್ತಿವೆ ಎಂದು ಸ್ವಾಗತ ಸಮಿತಿಯ ಕಾರ್ಯಾಧ್ಯಕ್ಷ ಯು.ಆರ್.ಸಭಾಪತಿ ತಿಳಿಸಿದ್ದಾರೆ.

ಇಂದಿಲ್ಲಿ ಕರೆದ ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿದ ಸಭಾಪತಿ, ಪ್ರತಿ ಜಿಲ್ಲೆಯಿಂದ ಪ್ರಥಮ, ದ್ವಿತೀಯ ಹಾಗೂ ತೃತೀಯ ಸ್ಥಾನ ಪಡೆದ ಮೂರು ಶಾಖೆಗಳ ತಲಾ 120 ವಿದ್ಯಾರ್ಥಿಗಳಂತೆ ರಾಜ್ಯದಾದ್ಯಂತದಿಂದ ಸುಮಾರು 5000 ವಿದ್ಯಾರ್ಥಿಗಳು ಹಾಗೂ ಶಿಕ್ಷಕರು ಈ ಕಾರ್ಯಕ್ರಮದಲ್ಲಿ ಭಾಗವಹಿಸಲಿದ್ದಾರೆ ಎಂದು ಅವರು ಹೇಳಿದರು.

ಫೆ.12ರಂದು ಮಕ್ಕಳ ಮೇಳವನ್ನು ಎಐಸಿಸಿ ಪ್ರಧಾನ ಕಾರ್ಯದರ್ಶಿ ಹಾಗೂ ರಾಜ್ಯಸಭಾ ಸದಸ್ಯ ಬಿ.ಕೆ.ಹರಿಪ್ರಸಾದ್ ಉದ್ಘಾಟಿಸಲಿದ್ದಾರೆ. ಭಾರತ ಸೇವಾದಲ ಕೇಂದ್ರ ಸಮಿತಿ ಅಧ್ಯಕ್ಷರಾದ ಎಚ್.ಎಂ.ಗುರುಸಿದ್ಧಸ್ವಾಮಿ ಅಧ್ಯಕ್ಷತೆ ವಹಿಸಲಿದ್ದಾರೆ. ಈ ಸಂದರ್ಭದಲ್ಲಿ ಹೊರತರಲಾಗುವ ಭಾರತ ಸೇವಾದಲದ ಮೂರು ಪುಸ್ತಕಗಳನ್ನು ರಾಜ್ಯ ಅಪೆಕ್ಸ್ ಬ್ಯಾಂಕ್‌ನ ಅಧ್ಯಕ್ಷ ಎಂ.ಎನ್.ರಾಜೇಂದ್ರ ಕುಮಾರ್ ಬಿಡುಗಡೆಗೊಳಿಸಲಿದ್ದಾರೆ ಎಂದು ಸಭಾಪತಿ ತಿಳಿಸಿದರು.

ಸಮಾರಂಭದಲ್ಲಿ ಸಂಸದೆ ಮನೋರಮಾ ಮಧ್ವರಾಜ್, ರಾಜ್ಯ ಭಾರತೀಯ ರೆಡ್‌ಕ್ರಾಸ್ ಸೊಸೈಟಿಯ ಉಪಾಧ್ಯಕ್ಷ ವೂಡೇ ಪಿ.ಕೃಷ್ಣ, ಮಾಜಿ ಸಭಾಪತಿ ವಿ.ಆರ್.ಸುದರ್ಶನ್, ಮಾಜಿ ಸಚಿವ ಡಾ.ವಿ.ಎಸ್.ಆಚಾರ್ಯ, ಜಿಪಂ ಅಧ್ಯಕ್ಷ ರಾಜು ಪೂಜಾರಿ ಹಾಗೂ ಇತರರು ಭಾಗವಹಿಸಲಿದ್ದಾರೆ ಎಂದವರು ಹೇಳಿದರು.

ಇದೇ ಸಂದರ್ಭದಲ್ಲಿ ಭಾರತ ಸೇವಾದಲ ಸಂಸ್ಥೆಯ ಉಪಾಧ್ಯಕ್ಷರೂ, ಹಿರಿಯ ಪತ್ರಕರ್ತರೂ ಆದ ಶಿವಶರಣಪ್ಪ ವಾಲಿ ಹಾಗೂ ಬೆಂಗಳೂರಿನ ಆರಭ ಸಂಸ್ಥೆಯ ನಿರ್ದೇಶಕರೂ, ಖ್ಯಾತ ಬರಹಗಾರರೂ ಆದ ಸುರೇಶ್ ಮೂನ ಅವರುಗಳನ್ನು ಮಣಿಪಾಲದ ಕೆ.ಕೆ.ಪೈ ಸನ್ಮಾನಿಸಲಿದ್ದಾರೆ.

ಅದೇ ದಿನ ಸಂಜೆ ಆರು ಗಂಟೆಗೆ ನೇತಾಜಿ ಸುಭಾಷ್‌ಚಂದ್ರ ಬೋಸ್ ವೇದಿಕೆಯಲ್ಲಿ ಸಾಂಸ್ಕೃತಿಕ ವೈಭವವನ್ನು ಮಾಜಿ ಶಾಸಕ ಕೆ.ರಘುಪತಿ ಭಟ್ ದೀಪ ಬೆಳಗಿಸುವ ಮೂಲಕ ಉದ್ಘಾಟಿಸಲಿದ್ದಾರೆ. ಇದರಲ್ಲಿ ಉಡುಪಿಯ ಬಾಲಮಿತ್ರ ಯಕ್ಷಗಾನ ಮಕ್ಕಳ ಮೇಳದಿಂದ ಯಕ್ಷಗಾನ ಪ್ರದರ್ಶನ ಹಾಗೂ ಜಾದೂಗಾರ ಕುದ್ರೋಳಿ ಗಣೇಶ್‌ರಿಂದ ಜಾದೂ ಪ್ರದರ್ಶನ ನಡೆಯಲಿದೆ ಎಂದರು.

ಮಧ್ಯಾಹ್ನ ಮೂರು ಗಂಟೆಗೆ ಸಮಾರೋಪ ಸಮಾರಂಭ ನಡೆಯಲಿದ್ದು, ರಾಜ್ಯ ಮೂರನೆ ಹಣಕಾಸು ಆಯೋಗದ ಅಧ್ಯಕ್ಷ ಎ.ಜಿ.ಕೊಡ್ಗಿ ಸಮಾರೋಪ ಭಾಷಣ ಮಾಡಲಿದ್ದಾರೆ. ಎಚ್.ಎಂ.ಗುರುಸಿದ್ಧಸ್ವಾಮಿ ಅಧ್ಯಕ್ಷತೆ ವಹಿಸಲಿದ್ದಾರೆ. ಜಿಲ್ಲಾಧಿಕಾರಿ ಪಿ.ಹೇಮಲತಾ, ಉದ್ಯಮಿ ಜಿ.ಶಂಕರ್ ಮುಂತಾದವರು ಮುಖ್ಯ ಅತಿಥಿಗಳಾಗಿ ಭಾಗವಹಿಸಲಿದ್ದಾರೆ.

ಮಕ್ಕಳ ಮೇಳದಲ್ಲಿ ಹೊರ ಜಿಲ್ಲೆಗಳಿಂದ 2,800 ಹಾಗೂ ಉಡುಪಿ ಮತ್ತು ದ.ಕ.ಜಿಲ್ಲೆಗಳಿಂದ ಸುಮಾರು ಎರಡು ಸಾವಿರ ಮಂದಿ ವಿದ್ಯಾರ್ಥಿಗಳು ಭಾಗವಹಿಸಲಿದ್ದಾರೆ. ಭಾರತ ಸೇವಾದಲಕ್ಕೆ ರಾಜ್ಯಾದ್ಯಂತ 14,800 ಶಾಖೆಗಳಿವೆ. ಐದನೆ ತರಗತಿಯಿಂದ ಹತ್ತನೆ ತರಗತಿಯವರೆಗಿನ ಮಕ್ಕಳು ಇದರಲ್ಲಿ ಪಾಲ್ಗೊಳ್ಳಬಹುದು ಎಂದು ಭಾರತ ಸೇವಾದಲದ ಕೇಂದ್ರ ಸಮಿತಿಯ ಪ್ರಧಾನ ಕಾರ್ಯದರ್ಶಿಗಳೂ ಆದ ಸಭಾಪತಿ ಹೇಳಿದರು.

ಪತ್ರಿಕಾಗೋಷ್ಠಿಯಲ್ಲಿ ಸ್ವಾಗತ ಸಮಿತಿಯ ಕಾರ್ಯದರ್ಶಿ ಕೆ.ಸಿ.ರಾಜೇಶ್, ಮಹಾಬಲ ಕುಂದರ್, ಗೋಪಾಲಕೃಷ್ಣ ಶೆಟ್ಟಿ, ಕೃಷ್ಣಮೂರ್ತಿ ಆಚಾರ್ಯ, ಜಯಶ್ರೀ ಕೃಷ್ಣರಾಜ್ ಹಾಗೂ ಯೋಜನಾಧಿಕಾರಿ ಎಸ್.ಲಿಂಗಪ್ಪ ಉಪಸ್ಥಿತರಿದ್ದರು.

ಉದಯವಾಣಿ ಪ್ರಾದೇಶಿಕ ವಾರ್ತೆಗಳು 12-2-2008



ಉಡುಪಿ: ಭಾರತ ಸೇವಾದಲ ವಿದ್ಯಾರ್ಥಿಗಳ ಪಥಸಂಚಲನದಲ್ಲಿ ಸೇವಾದಲ ಕೋಶಾಧ್ಯಕ್ಷ, ರೆಡ್‌ಕ್ರಾಸ್ ಸೊಸೈಟಿ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ, ಪ್ರಧಾನ ಕಾರ್ಯದರ್ಶಿ ಯು.ಆರ್. ಸಭಾಪತಿ ಧ್ವಜವಂದನೆ ಸ್ವೀಕರಿಸಿದರು.

# ಉಡುಪಿ: ಸೇವಾದಲ ರಂಗತಾಲೀಮು

ಉಡುಪಿ, ಫೆ. 11: ಉಡುಪಿಯ ಅಜ್ಜರಕಾಡು ಕ್ರೀಡಾಂಗಣದಲ್ಲಿ ಸುಮಾರು 3,000 ಭಾರತ ಸೇವಾ ದಲದ ವಿದ್ಯಾರ್ಥಿಗಳ ಸಂಗಮವಾಗಿದೆ. ರಾಜ್ಯ ಮಟ್ಟದ ರಾಷ್ಟ್ರೀಯ ಭಾವೈಕ್ಯತಾ ಮಕ್ಕಳ ಮೇಳಕ್ಕಾಗಿ ಫೆ. 11 ರಂದು ಆಗಮಿಸಿದ ಈ ವಿದ್ಯಾರ್ಥಿಗಳ ಶಾರೀರಿಕ ರಂಗ ತಾಲೀಮು ವಿಶಾಲವಾಗಿ ನಿರ್ಮಿಸಿದ ಚಪ್ಪರದಲ್ಲಿ ಆರಂಭಗೊಂಡಿದೆ.

## ರಾಜ್ಯ ಮಟ್ಟದ ಮೇಳ ಇಂದು ಉದ್ಘಾಟನೆ

ಎಲ್ಲ ಜಿಲ್ಲೆಗಳಿಂದ ಆಗಮಿಸಿದ ವಿದ್ಯಾರ್ಥಿಗಳು ಜಿಲ್ಲಾವಾರು ಶಿಸ್ತುಬದ್ಧವಾಗಿ ಸಂಚಯನಗೊಂಡು ಧ್ವಜವಂದನೆ, ಪಥಸಂಚಲನ, ವ್ಯಾಯಾಮ ಪ್ರದರ್ಶನವನ್ನು ನೀಡುತ್ತಿದ್ದಾರೆ. ಇವರಲ್ಲಿ ಅತ್ಯುತ್ತಮ ಘಟಕವನ್ನು ಆಯ್ಕೆ ಮಾಡಲಾಗುತ್ತದೆ.

ತೀರ್ಪುಗಾರರಾಗಿ ನಿವೃತ್ತ ಸೈನಿಕ ಆರ್.ಎಲ್. ಡಯಾಸ್, ನಿವೃತ್ತ ಅರಣ್ಯ ಅಧಿಕಾರಿ ರಘುರಾಮ ರಾವ್, ನಿವೃತ್ತ ನೌಕಾದಲ ಸಿಬಂದಿ ಡೇವಿಡ್ ಮಥಾಯಸ್ ಅವರು ಪಾಲ್ಗೊಳ್ಳುತ್ತಿದ್ದಾರೆ. ಸೇವಾದಲದ ಕೋಶಾಧ್ಯಕ್ಷ, ರೆಡ್‌ಕ್ರಾಸ್ ಸೊಸೈಟಿ ರಾಜ್ಯ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ, ಮಹಿಳಾ ವಿಭಾಗದ ಸಂಘಟನಾ ಕಾರ್ಯದರ್ಶಿ, ಚಿಕ್ಕ ಮಗಳೂರಿನ ಉಮಾ ಐ.ಬಿ. ಶಂಕರ್ ಮೊದಲಾದವರು ಈಗಾಗಲೇ ಆಗಮಿಸಿದ್ದು, ಅಧ್ಯಕ್ಷ ಎಚ್.ಎಂ. ಗುರುಸ್ವಾಮಿಯವರೂ ಸೇರಿದಂತೆ ವಿವಿಧ ಪದಾಧಿಕಾರಿಗಳು ಫೆ. 12ರ ಬೆಳಗ್ಗೆ ಆಗಮಿಸಲಿದ್ದಾರೆ.

ರ್‍ಯಾಲಿಯ ಉದ್ಘಾಟನೆ ಫೆ. 12ರ ಬೆಳಗ್ಗೆ 10.30ಕ್ಕೆ ನೆರವೇರಲಿದೆ. ಮೂರು ಹೊತ್ತಗೆಗಳು ಬಿಡುಗಡೆಗೊಳ್ಳಲಿವೆ. ಸಂಜೆ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯಲಿವೆ. ಫೆ. 13ರ ಬೆಳಗ್ಗೆ ನಗರದ ಪ್ರಮುಖ ಬೀದಿಗಳಲ್ಲಿ ವಿದ್ಯಾರ್ಥಿಗಳ ಆಕರ್ಷಕ ಪಥಸಂಚಲನ ನಡೆಯಲಿದ್ದು ಅಪರಾಹ್ನ ಸಮಾರೋಪ ಸಮಾರಂಭ ಜರಗಲಿದೆ. ಫೆ. 14ರಂದು ಧ್ವಜವಂದನೆ ಸಲ್ಲಿಸಿ ವಿದ್ಯಾರ್ಥಿಗಳು, ಶಿಕ್ಷಕರು ಊರುಗಳಿಗೆ ತೆರಳುವರು.

ರಾಜ್ಯದ ವಿವಿಧೆಡೆಗಳಿಂದ 2,500 ವಿದ್ಯಾರ್ಥಿಗಳು, ಸ್ಥಳೀಯ 500 ವಿದ್ಯಾರ್ಥಿಗಳು ಆಗಮಿಸಿದ್ದು ಇನ್ನಷ್ಟು ವಿದ್ಯಾರ್ಥಿಗಳು ಆಗಮಿಸಲಿದ್ದಾರೆ ಎಂದು ಸೇವಾದಲದ ಪ್ರಧಾನ ಕಾರ್ಯದರ್ಶಿ, ಸ್ವಾಗತ ಸಮಿತಿ ಕಾರ್ಯಾಧ್ಯಕ್ಷ ಯು.ಆರ್. ಸಭಾಪತಿ ಅವರು ತಿಳಿಸಿದ್ದಾರೆ.

ಬೆಂಗಳೂರಿನ ಹೆಮ್ಮೆಯ ಸಂಸ್ಥೆಗಳು: ಬ್ರಹ್ಮಸಮಾಜ

# ಸಿಟಿ ಬ್ರಹ್ಮಸಮಾಜದ ನಿರ್ಮಾಪಕರು

ಬೆಂಗಳೂರು ಇತಿಹಾಸ ಮಾಲೆ



■ ಸುರೇಶ್ ಮೂನ





ಪೂಡ ಪಿ. ಕೃಷ್ಣ

ಹಳೇ ಬೆಂಗಳೂರಿನ ಅರಳೇಪೇಟೆಯ ಸಿಟಿ ಬ್ರಹ್ಮಸಮಾಜದಲ್ಲಿ ಹಲವಾರು ದಶಕಗಳ ಕಾಲ ಡಬ್ಲ್ಯೂ. ಎಚ್. ಹನುಮಂತಪ್ಪ (ಹಿರಿಯ) ಮತ್ತು ಎಂ. ಕದಿರಪ್ಪ ಈ ಇಬ್ಬರು ಮಹನೀಯರುಗಳೇ ಚಿಂತನಾ ಸಭೆಗಳನ್ನು ಸತತವಾಗಿ ಹಾಗೂ ವ್ಯವಸ್ಥಿತವಾಗಿ ನಡೆಸಿಕೊಂಡು ಬಂದರು. ಆದರೆ ನಂತರದ ಸ್ವಲ್ಪ ಕಾಲ ಇವರೀರ್ವರೂ ಅನಾರೋಗ್ಯಕ್ಕೊಳಗಾದುದರಿಂದ, ಇಲ್ಲಿನ ಚಟುವಟಿಕೆಗಳು ಕಡಿಮೆಯಾಗಿ ಸಮಾಜದ ಕಟ್ಟಡವನ್ನು ಪ್ರಾಥಮಿಕ ಶಾಲೆಯೊಂದನ್ನು ನಡೆಸಲು ನೀಡಲಾಯಿತು. ಹನುಮಂತಪ್ಪನವರೇ ಇದರ ಏಕೈಕಟ್ರಸ್ಟಿಯಾಗಿ ನಿರ್ವಹಣೆ ಮಾಡಿದರು. 1933ರಲ್ಲಿ ರಾಜಾರಾಮ ಮೋಹನರಾಯರ ನಿಧನದ ಶತಮಾನದ ಸಂದರ್ಭವನ್ನು ಬಹಳ ಅರ್ಥಪೂರ್ಣವಾಗಿ ಈ ಕೇಂದ್ರ ಆಚರಿಸಿತ್ತು; ಅದರಲ್ಲಿ ನಗರಸಭಾಧ್ಯಕ್ಷರಾಗಿದ್ದ ಸರ್. ಕೆ.ಪಿ. ಪುಟ್ಟಣ್ಣಚೆಟ್ಟಿ, ವಿಜ್ಞಾನಿ ಸರ್. ಸಿ.ವಿ. ರಾಮನ್ ಹಾಗೂ ಸ್ವಾತಂತ್ರ್ಯ ಹೋರಾಟಗಾರ ಕೆ.ಟಿ. ಭಾಷ್ಯಂ ಭಾಗವಹಿಸಿ ಬ್ರಹ್ಮಸಮಾಜದ ಹಿರಿಮೆಯನ್ನು ಕೊಂಡಾಡಿದ್ದರು.

ಈ ಕೇಂದ್ರದ ಇತಿಹಾಸದಲ್ಲಿ ಈ ಕಾರ್ಯಕ್ರಮ ಒಂದು ಪ್ರಮುಖ ಸಂಗತಿಯಾಗಿ ದಾಖಲಾಗಿದೆ. ಈ ಮಧ್ಯೆ, ಆಗಿನ ಸಿಟಿ ಮುನಿಸಿಪಲ್ ಕೌನ್ಸಿಲ್ ಅರಳೇಪೇಟೆಯ ಕಿರಿದಾದ ರಸ್ತೆಗಳನ್ನು ಸ್ವಲ್ಪ ಅಗಲ ಮಾಡುವ ಸಲುವಾಗಿ ಈ ಕೇಂದ್ರದ ವರಾಂಡವಿದ್ದ ಜಾಗವನ್ನು ಪಡೆದುಕೊಂಡಿತು. ಇದಕ್ಕೆ ಪರಿಹಾರ ರೂಪದಲ್ಲಿ 750 ರೂ.ಗಳನ್ನು ನೀಡಲಾಯಿತು. ಈ ಹಣವನ್ನು ಬ್ಯಾಂಕ್‌ನಲ್ಲಿಟ್ಟು ಬಡ್ಡಿ ಸಮೇತ ಬಂದ ಐದು ಸಾವಿರ ರೂ.ಗಳನ್ನು ಕಂಟೋನ್ಮೆಂಟ್ ಬ್ರಹ್ಮಸಮಾಜದ ಖಾತೆಗೆ ವರ್ಗಾಯಿಸಲಾಯಿತು.

ಡಬ್ಲ್ಯೂ. ಎಚ್. ಹನುಮಂತಪ್ಪ (ಕಿರಿಯ)ನವರು ಈ ಕೇಂದ್ರದ ಕಟ್ಟಡದಲ್ಲಿದ್ದ ಶಾಲೆಯು ನೀಡುತ್ತಿದ್ದ ಬಾಡಿಗೆಯನ್ನು ಕಂಟೋನ್ಮೆಂಟ್ ಬ್ರಹ್ಮ ಸಮಾಜದ ಖಾತೆಗೆ ಜಮಾ ಮಾಡುತ್ತಿದ್ದರು. ಹೀಗೆ ಅಲ್ಲಿ ಒಟ್ಟುಗೂಡಿದ್ದ ಹತ್ತು ಸಾವಿರ ರೂ.ಗಳನ್ನು ಬಳಸಿ ಸಿಟಿ ಬ್ರಹ್ಮಸಮಾಜದ ಹಳೆಯ ಕಟ್ಟಡವನ್ನು ಕೆಡವಿ ಹೊಸ ಕಟ್ಟಡ ನಿರ್ಮಾಣಕ್ಕಾಗಿ ಬಳಸಲಾಯಿತು.

1982ರಲ್ಲಿ ಹಜಾರಿಬಾಗ್‌ನಲ್ಲಿ ನಡೆದ ಅಖಿಲ ಭಾರತ ಬ್ರಹ್ಮ ಸಮ್ಮೇಳನದ 92ನೇ ಸಮಾರಂಭದ ಅಧ್ಯಕ್ಷತೆಯನ್ನು ಡಬ್ಲ್ಯೂ. ಎಚ್. ಹನುಮಂತಪ್ಪ (ಕಿರಿಯ) ವಹಿಸಿದ್ದರು. ಈ ಸಂದರ್ಭದಲ್ಲಿ ಅವರು ಕಾರಣಾಂತರಗಳಿಂದ ನಿಸ್ತೇಜಗೊಂಡ ಯಾವುದೇ ಬ್ರಹ್ಮ ಸಮಾಜದ ಕೇಂದ್ರವನ್ನು ಅವಸಾನಗೊಳ್ಳಲು ಬಿಡದೆ ಪುನಶ್ಚೇತನಗೊಳಿಸುವ ಅವಶ್ಯಕತೆಯನ್ನು ಒತ್ತಿ ಹೇಳಿದರು. ಹಾಗೆಯೇ ತಾವೇ ಸ್ವತಃ ಸಿಟಿ ಬ್ರಹ್ಮ ಸಮಾಜದಲ್ಲಿ ಚೇತನವನ್ನು ತುಂಬಲು ಮೊದಲು ಮಾಡಿದರು. ಹಳೆಯ ಕಟ್ಟಡದಲ್ಲಿದ್ದ ಶಾಲೆಯನ್ನು ತೆರವುಗೊಳಿಸಿ ಒಂದು ಮಹಡಿಯಿರುವ ಕಟ್ಟಡವನ್ನು ನರಸಮ್ಮ ಡಬ್ಲ್ಯೂ. ಎಚ್. ಹನುಮಂತಪ್ಪ ಟ್ರಸ್ಟ್ ಮತ್ತು ಪೈ ಮುನಿಸ್ವಾಮಪ್ಪ ಇವರು ನೀಡಿದ ದಾನದ ಹಣವನ್ನು ಬಳಸಿ ಒಂದು ವರ್ಷದಲ್ಲಿ ಪುನರ್ ನಿರ್ಮಾಣ ಮಾಡಿದರು.

1985ರ ಫೆಬ್ರವರಿಯಲ್ಲಿ ಪೂರ್ಣಗೊಂಡ ಈ ಮೊದಲ ಮಹಡಿಯನ್ನು ಬೆಂಗಳೂರು ಬ್ರಹ್ಮಸಮಾಜದ ಗೌ. ಕಾರ್ಯದರ್ಶಿಗಳಾಗಿದ್ದ ಡಾ. ಎಂ. ಗುರುದಾಸ್ ಉದ್ಘಾಟನೆ ಮಾಡಿದರು. ಹೀಗೆ ನವೀಕರಣಗೊಂಡ ಸಿಟಿ ಬ್ರಹ್ಮಸಮಾಜವು ಬಾಡಿಗೆಯಿಂದ ಬಂದ ಹಣವನ್ನು ಸೇವಾ ಕಾರ್ಯಗಳಿಗೆ ವಿನಿಯೋಗಿಸುತ್ತಿರುವುದು ಗಮನಾರ್ಹ ಸಂಗತಿ.

ಕಂಟೋನ್ಮೆಂಟ್ ಬ್ರಹ್ಮಸಮಾಜದ ಪ್ರಭಾವ ಬಾಲಕಿಯರ ಶಾಲೆಯಲ್ಲಿ ಒಂದು ತರಗತಿಯನ್ನು ನಿರ್ಮಿಸಲು ಎರಡು ಲಕ್ಷ ರೂ.ಗಳನ್ನು ನೀಡಿರುವುದಲ್ಲದೆ 1985ರಿಂದ ಪ್ರತಿ ವರ್ಷ ಬ್ರಹ್ಮ ಸಮ್ಮೇಳನಕ್ಕೂ ಇದು ಆರ್ಥಿಕ ನೆರವು ನೀಡುತ್ತಾ ಬಂದಿದೆ. 2001ರಲ್ಲಿ ಗುಜರಾತ್‌ನಲ್ಲಿ ಭೂಕಂಪವಾದಾಗ ಅಲ್ಲಿನ ಸಂತ್ರಸ್ತರ ನೆರವಿಗಾಗಿ ಪರಿಹಾರ ನಿಧಿಯನ್ನು ನೀಡಿದೆ. ಬೆಂಗಳೂರು ಬ್ರಹ್ಮ ಸಮಾಜದ ವೀರೇಶಲಿಂಗಮ್ ಸ್ಮಾರಕ ಸಭಾಂಗಣದ ಪುನರುಜ್ಜೀವನದ ಕೆಲಸಕ್ಕೂ ಇದರಿಂದ ಕೊಡುಗೆ ಸಂದಿದೆ. ಪುಣೆಯಲ್ಲಿ ಬ್ರಹ್ಮಮಂದಿರದ ದುರಸ್ತಿಗೂ ಈ ಕೇಂದ್ರ ನೆರವು ನೀಡಿದೆ.

ಪ್ರಸ್ತುತ ಕೇಂದ್ರದ ಆಡಳಿತ ಮಂಡಳಿಯಲ್ಲಿ ಬಿ.ಪಿ. ಚಂದ್ರಶೇಖರ್ (ಅಧ್ಯಕ್ಷ, ಪೂಡ ಪಿ. ಕೃಷ್ಣ) ಟ್ರಸ್ಟಿಗಳಾಗಿ ಟಿ.ಜಿ. ಸಿದ್ಧವೀರಪ್ಪ, ಎಂ. ನಾರಾಯಣದಾಸ್, ಡಬ್ಲ್ಯೂ. ಎಚ್. ದೇವಕುಮಾರ್, ಡಬ್ಲ್ಯೂ. ಎಚ್. ಪುಟ್ಟಯ್ಯ, ಡಬ್ಲ್ಯೂ. ಜಿ. ರಾಮಕೃಷ್ಣ, ಡಬ್ಲ್ಯೂ. ಎಚ್. ಧ್ರುವಕುಮಾರ್, ಡಬ್ಲ್ಯೂ. ಎಚ್. ಅನಿಲ್ ಕುಮಾರ್, ಎಂ. ಗೋಪಾಲ್ ಕಾರ್ಯ ನಿರ್ವಹಿಸುತ್ತಿದ್ದಾರೆ. ಡಬ್ಲ್ಯೂ. ಎಚ್. ಹನುಮಂತಪ್ಪ (ಕಿರಿಯ)ನವರು ತಮ್ಮ ತಂದೆಯಂತೆ ಈ ಕೇಂದ್ರದ ಬೆಳವಣಿಗೆ, ನಗರದ ಬ್ರಹ್ಮ ಸಮಾಜದ ಅಭಿವೃದ್ಧಿ ಹಾಗೂ ಇತರ ಸಂಘ ಸಂಸ್ಥೆಗಳ ಕಾರ್ಯ ನಿರ್ವಹಣೆಯಲ್ಲೂ ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ. ಗಾಂಧೀಜಿಯವರ ಅನುಯಾಯಿಯಾಗಿದ್ದ ಇವರು, ಖಾದಿ ಮತ್ತು ಗ್ರಾಮೋದ್ಯೋಗದ ಬೆಂಬಲಿಗರಾಗಿದ್ದರು. 1942ರಲ್ಲಿ ಕ್ವಿಟ್ ಇಂಡಿಯಾ ಚಳವಳಿಯಲ್ಲೂ ಇವರು ಸಕ್ರಿಯವಾಗಿ ಪಾಲ್ಗೊಂಡಿದ್ದರು. 1960ರ ದಶಕದಲ್ಲಿ ಬೆಂಗಳೂರು ನಗರ ಪಾಲಿಕೆಯಲ್ಲಿ ಮೇಯರ್ ಮತ್ತು ಉಪಮೇಯರ್ ಸ್ಥಾನದ ನಂತರ ಆಲ್ಡರ್‌ಮನ್ ಎಂಬ ಗೌರವ ಸ್ಥಾನವಿತ್ತು. ರಾಜ್ಯ ಸರ್ಕಾರವು ಈ ಸ್ಥಾನಕ್ಕೆ ನಗರದ ಗಣ್ಯ ವ್ಯಕ್ತಿಯೊಬ್ಬರನ್ನು ನೇಮಿಸುತ್ತಿತ್ತು. ಹನುಮಂತಪ್ಪನವರು 1962ರಿಂದ 69ರ ವರೆಗಿನ ಏಳು ವರ್ಷಗಳ ಕಾಲ ಈ ಗೌರವ ಸ್ಥಾನದಲ್ಲಿದ್ದರು. ಅಷ್ಟೇ ಅಲ್ಲದೆ ಬಾಲಕಿಯರ ಶಾಲೆಯಲ್ಲಿ ಕಾರ್ಯದರ್ಶಿಯಾಗಿ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳ ಸಂಸ್ಥಾಪಕ ಕಾರ್ಯದರ್ಶಿಗಳಾಗಿ, ಗಾಂಧಿ ಶಾಂತಿ ಪ್ರತಿಷ್ಠಾನದ ಬೆಂಗಳೂರು ಕೇಂದ್ರದ ಸಂಸ್ಥಾಪಕ ಸದಸ್ಯರಲ್ಲೊಬ್ಬರಾಗಿ, ಅತ್ಯ ವೃದ್ಧರಿಗಾಗಿ ಬಾಲಾದ ಚಿಕ್ಕಬಂಟಗಳಾಗಿ, ಸಂಪನ್ನ ಬಾಂಟೀಸ್‌ನ ಅಧ್ಯಕ್ಷರಾಗಿ, ಸಹರೂ ನಗರದ ಕೊ. ಆಪರೇಟಿವ್ ಬ್ಯಾಂಕ್‌ನ ಮುಖ್ಯಸ್ಥರಾಗಿ ಇವರು ಸಲ್ಲಿಸಿರುವ ಸೇವೆ ಅಪಾರ. ತಮ್ಮ ತಂದೆಯವರು ಕನ್ನಡದಲ್ಲಿ ಬರೆದ ರಾಜಾರಾಮ್ ಮೋಹನರಾಯ್‌ರ ಬಗೆಗಿನ ಪುಸ್ತಕವನ್ನು ಮರು ಮುದ್ರಿಸಿದ್ದಾರೆ. 1968ರಲ್ಲಿ ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತ ಬ್ರಹ್ಮ ಸಮಾಜದ ಸಮ್ಮೇಳನವನ್ನು ಎಂ. ಮಹದೇವನ್ ಮತ್ತು ಎಂ. ಬುದ್ಧದಾಸ್‌ರವರೊಂದಿಗೆ ಆಯೋಜಿಸಿದ್ದು ಇವರೇ. 1976ರ ದಕ್ಷಿಣ ವಿಭಾಗೀಯ ಬ್ರಹ್ಮ ಸಮ್ಮೇಳನವನ್ನು ಏರ್ಪಡಿಸಿದ್ದರಲ್ಲದೆ ಹಜಾರಿಬಾಗ್ ಮತ್ತು ಇಂದೋರ್‌ನಲ್ಲಿ ನಡೆದ 92 ಮತ್ತು 93ನೇ ಬ್ರಹ್ಮಸಮ್ಮೇಳನಗಳ ಅಧ್ಯಕ್ಷತೆ ವಹಿಸಿದ್ದ ಹೆಗ್ಗಳಿಕೆಯೂ ಇವರದ್ದು. ಇಡೀ ಭಾರತದ ಬ್ರಹ್ಮ ಸಮಾಜಗಳ ಒಕ್ಕೂಟವನ್ನು ರಚಿಸುವುದು ಇವರ ಉದ್ದೇಶವಾಗಿತ್ತು.

ಸಿಟಿ ಬ್ರಹ್ಮ ಸಮಾಜದ ಬೆಳವಣಿಗೆಯಲ್ಲಿ ಈಗ ಅಧ್ಯಕ್ಷರಾಗಿರುವ ಬಿ.ಪಿ. ಚಂದ್ರಶೇಖರ್‌ರವರು ಸಕ್ರಿಯ ಪಾತ್ರ ವಹಿಸಿದ್ದಾರೆ. ನಗರದ ಪ್ರಸಿದ್ಧ ಆಭರಣ ವ್ಯಾಪಾರಿಗಳಾದ ಸುಗಪ್ಪ ಕುಟುಂಬಕ್ಕೆ ಸೇರಿದ ಇವರು, 1930 ರಿಂದಲೇ ಬ್ರಹ್ಮ ಸಮಾಜದ ಅನುಯಾಯಿಗಳಾಗಿ, ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿದ್ದರು. ಸಿಟಿ ಬ್ರಹ್ಮ ಸಮಾಜದ ಪ್ರಸ್ತುತ ಕಾರ್ಯದರ್ಶಿಯಾಗಿರುವ ಪೂಡ ಪಿ. ಕೃಷ್ಣರವರು ಬ್ರಹ್ಮ ಸಮಾಜದ ಚಿಂತನಶೀಲ ಯುವ ಪೀಳಿಗೆಯ ಪ್ರತಿನಿಧಿಯಾಗಿದ್ದಾರೆ. ನಗರದ ಹಲವಾರು ಸೇವಾ ಹಾಗೂ ಶಿಕ್ಷಣ ಸಂಸ್ಥೆಗಳ ಪ್ರಮುಖ ಪದಾಧಿಕಾರಿಗಳಾಗಿರುವ ಇವರು ಗಂಗಾಧರ ಚೆಟ್ಟಿ ಬ್ರಹ್ಮಮಂದಿರದಲ್ಲಿ ಪ್ರತಿ ತಿಂಗಳ ಎರಡನೇ ಭಾನುವಾರಗಳಂದು ಪವಿತ್ರ ಸಭೆಗಳನ್ನು ನಡೆಸಿಕೊಡುತ್ತಾರೆ. 2004ರಲ್ಲಿ ಪೂನಾದಲ್ಲಿ ಹಾಗೂ 2006ರಲ್ಲಿ ಹೈದ್ರಾಬಾದ್‌ನಲ್ಲಿ ನಡೆದ ಅಖಿಲ ಭಾರತ ಬ್ರಹ್ಮಸಮ್ಮೇಳನದ ಅಧ್ಯಕ್ಷತೆ ವಹಿಸಿರುವ ಇವರು ಆಹ್ವಾನದ ಮೇರೆಗೆ ಬ್ರಹ್ಮ ಸಮಾಜದ ಮತ್ತು ರಾಜಾರಾಮ ಮೋಹನರಾಯರ ಬಗ್ಗೆ ಪ್ರಬುದ್ಧ ಉಪನ್ಯಾಸವನ್ನು ನೀಡಬಲ್ಲರು. ಬ್ರಹ್ಮ ಸಮಾಜಗಳ ಒಕ್ಕೂಟಗಳ ಮಂಡಲಿಯಲ್ಲಿ ಸಿಟಿ ಬ್ರಹ್ಮ ಸಮಾಜದ ಪ್ರತಿನಿಧಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ತಮ್ಮ ಕುಟುಂಬದ ಹಿರಿಯರು ಈ ಸಂಸ್ಥೆಗೆ ನೀಡಿರುವ ಮಹತ್ತರ ಕೊಡುಗೆಯ ಪರಂಪರೆಯನ್ನು ಹಾಗೆಯೇ ಉಳಿಸಿಕೊಂಡು ಬರುತ್ತಿರುವುದರಲ್ಲದೆ ಅದನ್ನು ಇನ್ನೂ ಉತ್ತಮ ರೀತಿಯಲ್ಲಿ ಮುಂದಿನ ಪೀಳಿಗೆಗೂ ತಲುಪಿಸುವ ಕಾಯಕದಲ್ಲಿ ತೊಡಗಿದ್ದಾರೆ ಪೂಡ ಪಿ. ಕೃಷ್ಣರವರು.

■ ಮುಂದುವರಿಯುವುದು

ಬೆಂಗಳೂರು ವಿಜಯ | ಬುಧವಾರ, 6 ಫೆಬ್ರವರಿ 2008



ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಆಶ್ರಯದಲ್ಲಿ ರಕ್ತದಾನ ಶಿಬಿರ ಹಮ್ಮಿಕೊಳ್ಳಲಾಗಿತ್ತು. ಡಾ. ಸುರೇಶ್ವರಯ್ಯ, ವೂಡೇ ಕೃಷ್ಣ, ಪ್ರೊ. ದೊರೈರಾಜ್, ನಂಜುಂಡಪ್ಪ ಭಾಗವಹಿಸಿದ್ದರು.

ಪ್ರಜಾವಾಣಿ
ಶನಿವಾರ 2ನೇ ಫೆಬ್ರುವರಿ 2008

## ವಾರ್ಷಿಕೋತ್ಸವ

ಶೇಷಾದ್ರಿಪುರ ಸ್ತ್ರೀ ಸಮಾಜ ಮಾಧ್ಯಮಿಕ ಶಾಲೆಯ ವಾರ್ಷಿಕೋತ್ಸವ. ವಿದ್ಯಾರ್ಥಿಗಳಿಂದ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮ. ಅತಿಥಿಗಳು: ಎಂ.ಜೆ. ಕಮಲಾಕ್ಷಿ, ವೂಡೆ. ಪಿ. ಕೃಷ್ಣ, ಎಚ್.ಎನ್. ಶಿವಕುಮಾರ್ ಆರಾಧ್ಯ. ಅಧ್ಯಕ್ಷತೆ: ಕೆ.ಎಂ.ನಂಜಪ್ಪ. ಸ್ಥಳ: ಶಾಲೆಯ ಆವರಣ, ಶೇಷಾದ್ರಿಪುರ. ಬೆಳಿಗ್ಗೆ 11.

ಸಾಂಸ್ಕೃತಿಕ ಮುನ್ನೋಟ

ಪ್ರಜಾವಾಣಿ

ಫೆಬ್ರವರಿ 2, ಶನಿವಾರ

## 'ಹರಿದಾಸರು ಹರಸಿದ ಈ ನಾಡು' ಕೃತಿ ಬಿಡುಗಡೆ



ಪ್ರೊ. ನಾ. ಗೀತಾಚಾರ್ಯ

ಪ್ರೊ. ನಾ. ಗೀತಾಚಾರ್ಯ ಅವರು ಶೇಷಾದ್ರಿಪುರ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದವರು. ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಗೌರವ ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸಿರುವ ಇವರು ಕನ್ನಡ ಸಾಹಿತ್ಯ ಲೋಕದಲ್ಲಿ ಭಾಷೆ- ಶಾಸನ, ಸಾಹಿತ್ಯ, ಸಂಸ್ಕೃತಿಗಳ- ಸಂಶೋಧಕರಾಗಿ ಮತ್ತು ಕನ್ನಡ ಹೋರಾಟಗಾರರಾಗಿ ತಮ್ಮನ್ನು ತಾವು ಗುರುತಿಸಿಕೊಂಡಿರುವ ವ್ಯಕ್ತಿ.

ದೊಡ್ಡಬಳ್ಳಾಪುರದ ದೊಡ್ಡಹೆಜ್ಜಾಜಿ ಗ್ರಾಮದವರಾದ ಇವರು ಹರಿದಾಸ ಸಾಹಿತ್ಯದಲ್ಲಿನ ವಿಶಿಷ್ಟಾದ್ವೈತ ಪರಂಪರೆಯನ್ನು ಗುರುತಿಸಿಕೊಟ್ಟವರು. ಸಾಹಿತ್ಯ ಚರಿತ್ರೆಕಾರರಿಂದ ಕನ್ನಡದಲ್ಲಿ ವಿಶಿಷ್ಟಾದ್ವೈತ ಸಾಹಿತ್ಯವೇ ರಚನೆಯಾಗಿಲ್ಲ ಎಂಬ ಹೇಳಿಕೆಯನ್ನು ಬದಲಿಸಿ ಐನೂರು ವರ್ಷದ ಪರಂಪರೆಯನ್ನು ತೆರೆದಿಟ್ಟವರು.

'ಹರಿದಾಸ ಸಾಹಿತ್ಯದ ಮೂರು ದಾರಿಗಳು', 'ಬೇಲೂರು ವೈಕುಂಠದಾಸರ ಕೀರ್ತನೆಗಳು', 'ಶ್ರೀಗುರು ತುಳಸಿರಾಮ ದಾಸರು', 'ಸಮಗ್ರ ದಾಸ ಸಾಹಿತ್ಯ ಸಂಪುಟ- 35' ಮುಂತಾದ ಗಮನಾರ್ಹ ಹಲವು ಕೃತಿಗಳನ್ನು ಕೊಟ್ಟಿದ್ದಾರೆ.

ಇದೀಗ ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಆಶ್ರಯದಲ್ಲಿ ಪ್ರೊ. ಎಲ್.ಎಸ್. ಶೇಷಗಿರಿರಾವ್ ಅವರಿಂದ ಪ್ರೊ. ನಾ. ಗೀತಾಚಾರ್ಯ ಅವರಿಗೆ ಸನ್ಮಾನ. ಇದರೊಂದಿಗೆ ಡಾ. ಸಿ. ವೀರಣ್ಣ ಅವರಿಂದ ಗೀತಾಚಾರ್ಯ ಅವರ 50ನೇ ಕೃತಿ 'ಹರಿದಾಸರು ಹರಸಿದ ಈ ನಾಡು' ಕೃತಿ ಬಿಡುಗಡೆ ಕೂಡ ನಡೆಯಲಿದೆ. ಅತಿಥಿಗಳು: ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ವೂಡೆ ಪಿ. ಕೃಷ್ಣ, ಡಾ. ಟಿ.ವಿ. ನಾರಾಯಣ. ಅಧ್ಯಕ್ಷತೆ: ಡಾ. ಬಿ. ನಾರಾಯಣ.
ಸ್ಥಳ: ಕನ್ನಡ ಸಾಹಿತ್ಯ ಪರಿಷತ್, ಚಾಮರಾಜಪೇಟೆ. ಸಂಜೆ 5.

ಉದಯವಾಣಿ ಶನಿವಾರ, 2 ಫೆಬ್ರವರಿ 2008



ಶೇಷಾದ್ರಿಪುರಂ ಬಾಲಕಿಯರ ಪ್ರೌಢಶಾಲೆಯಲ್ಲಿ ಏರ್ಪಡಿಸಿದ್ದ ಕೆ.ಸಿ. ಪುಟ್ಟನರಸಯ್ಯ ಸ್ಮಾರಕ ಪ್ರೌಢಶಾಲಾ ದೇವರನಾಮ ಸ್ಪರ್ಧೆಯನ್ನು ಗಾಯಕ ಚಿನ್ಮಯ ಉದ್ಘಾಟಿಸಿದರು. ಸಂಸ್ಥೆಯ ಪ್ರೊ.ಡೇ ಕೃಷ್ಣ, ಸರೋಜಾ ನಂಜಪ್ಪ, ಮುಖ್ಯ ಶಿಕ್ಷಕಿ ರಮಾ ಮತ್ತಿತರರು ಪಾಲ್ಗೊಂಡಿದ್ದರು.

ಸಂಜೆವಾಣಿ
ಶನಿವಾರ 2 ಫೆಬ್ರವರಿ 2008



ಮಾಜಿ ಮಹಾಪೌರ ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಕೆ.ಎಂ. ನಂಜಪ್ಪನವರ 97ನೇ ಹುಟ್ಟುಹಬ್ಬದ ಪ್ರಯುಕ್ತ ಲಯನ್ಸ್ ಸಂಸ್ಥೆ ಮಾಧವನಗರ ಮತ್ತು ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಜಂಟಿ ಆಶ್ರಯದಲ್ಲಿ ಬೃಹತ್ ಸ್ವಯಂ ರಕ್ತದಾನ ಶಿಬಿರ ಏರ್ಪಡಿಸಲಾಗಿತ್ತು. ಶಿಬಿರದ ಉದ್ಘಾಟನೆಯನ್ನು ಭಾರತೀಯ ವೈದ್ಯಕೀಯ ಸಂಸ್ಥೆ ಅಧ್ಯಕ್ಷ ಡಾ.ಎಸ್.ಎಂ. ಸುರೇಶ್ವರಯ್ಯನವರು ನೆರವೇರಿಸಿದರು. ಇದೇ ಸಂದರ್ಭದಲ್ಲಿ ರಾಜ್ಯ ರೆಡ್‌ಕ್ರಾಸ್ ಸಂಸ್ಥೆಯ ಉಪಾಧ್ಯಕ್ಷ ವೂಡೇ ಪಿ.ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಶೇಷಾದ್ರಿಪುರಂ ಕಾಲೇಜಿನ ಪ್ರಾಂಶುಪಾಲ ಪ್ರೊ ಎಸ್.ಎನ್. ದೊರೈರಾಜ, ಲಯನ್ಸ್ ಅಧ್ಯಕ್ಷ ನಂಜುಡಪ್ಪ, ಕಾರ್ಯದರ್ಶಿ ಕಮಲನಾಥನ್ ಉಪಸ್ಥಿತರಿದ್ದರು.

ಉದಯವಾಣಿ ಜನವರಿ 31, 2008

# ವಾರ್ಷಿಕೋತ್ಸವ



ಶೇಷಾದ್ರಿಪುರಂ ಬಾಲಕಿಯರ ಪ್ರೌಢಶಾಲೆಯಲ್ಲಿ ನಡೆದ ಶಾಲಾ ವಾರ್ಷಿಕೋತ್ಸವ ಸಮಾರಂಭವನ್ನು ಮುಖ್ಯ ಶಿಕ್ಷಕಿ ಸಿ. ಆರ್. ರಮಾ ಅವರು ಉದ್ಘಾಟಿಸಿದರು. ಗೀತಾಪ್ರಸಾದ್, ಗೌರವ ಪ್ರಧಾನ ಕಾರ್ಯದರ್ಶಿ ವೂಡೆ.ಪಿ. ಕೃಷ್ಣ, ಶಾಲಾಭಿವೃದ್ಧಿ ಸಮಿತಿಯ ಸರೋಜ ಕೆ.ಎಂ. ನಂಜಪ್ಪ ಮೊದಲಾದವರು ಭಾಗವಹಿಸಿದ್ದರು.

ಸಂಜೆವಾಣಿ

ಬುಧವಾರ 30 ಜನವರಿ 2008




ಸರ್ವೋದಯ ದಿನಾಚರಣೆ ಅಂಗವಾಗಿ ಬೆಂಗಳೂರು ನಗರದಲ್ಲಿ ಶಾಲಾ ಮಕ್ಕಳು ಮಹಾತ್ಮ ಗಾಂಧೀಜಿ ಭಾವಚಿತ್ರದೊಂದಿಗೆ ಮೆರವಣಿಗೆ ನಡೆಸಿದರು.

ಸಂಜೆವಾಣಿ

ಬುಧವಾರ 30 ಜನವರಿ 2008




ರಾಜ್ಯ ಹೈಕೋರ್ಟ್ ನೌಕರರ ಸಂಘವು ಆಯೋಜಿಸಿದ್ದ ಸ್ವಯಂಪ್ರೇರಿತ ರಕ್ತದಾನ ಶಿಬಿರವನ್ನು ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಉದ್ಘಾಟಿಸಿದರು. ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯಶಾಖೆಯ ಉಪಾಧ್ಯಕ್ಷ ವೊಡೇ ಪಿ. ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ನ್ಯಾಯಮೂರ್ತಿ ಮಂಜುಳಾ ಚೆಲ್ಲೂರು, ರಾಜ್ಯ ಹೈಕೋರ್ಟ್ ನೌಕರರ ಸಂಘದ ಅಧ್ಯಕ್ಷ ನಾಡಗೌಡರ್ ರವರು ಉಪಸ್ಥಿತರಿದ್ದರು.

ವಿಜಯ ಕರ್ನಾಟಕ | ಬುಧವಾರ, 30 ಜನವರಿ 2008 | ಬೆಂಗಳೂರು

## ರಕ್ತದಾನಕ್ಕೆ ಮುಂದಾಗಿ



ಅಪಘಾತಗಳಲ್ಲಿ ಗಾಯಗೊಂಡು ಸಾವಿಗೀಡಾಗುವವರ ಸಂಖ್ಯೆ ತಗ್ಗಿಸಬೇಕಾದರೆ ಜನರು ಸ್ವಯಂಪ್ರೇರಿತರಾಗಿ ರಕ್ತದಾನಕ್ಕೆ ಮುಂದಾಗಬೇಕು ಎಂದು ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಕರೆ ನೀಡಿದರು. ಕರ್ನಾಟಕ ಹೈಕೋರ್ಟ್ ನೌಕರರ ಕ್ಷೇಮಾಭಿವೃದ್ಧಿ ಸಂಘ, ಸೋಮವಾರ ಆಯೋಜಿಸಿದ್ದ ರಕ್ತದಾನ ಶಿಬಿರಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು. ಕೋಮು ಸೌಹಾರ್ದ ಸಾರುವ ನಿಟ್ಟಿನಲ್ಲಿ ರಕ್ತದಾನ ಒಂದು ದೊಡ್ಡ ಆಂದೋಲನವಾಗಬೇಕು ಎಂದು ಹೇಳಿದರು. ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಯ ಉಪಾಧ್ಯಕ್ಷ ವೂಡೇ ಪಿ.ಕೃಷ್ಣ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ವೈದ್ಯರಾದ ಕಾಶೀನಾಥ್ ದೀಕ್ಷಿತ್, ತ್ರಿವೇಣಿ, ಸಂಘದ ಅಧ್ಯಕ್ಷ ಎಂ.ಎನ್.ನಾಡಗೌಡರ್, ಪ್ರಧಾನ ಕಾರ್ಯದರ್ಶಿ ಪಿ.ಶ್ರೀನಿವಾಸ್ ಭಾಗವಹಿಸಿದ್ದರು.

ಈ ಸಂಜೆ

30-01-2008, ಬುಧವಾರ




ನಗರದ ಗಾಂಧೀ ಭವನದಲ್ಲಿಂದು ಗಾಂಧಿ ಸ್ಮಾರಕ ನಿಧಿಯಿಂದ ಸರ್ವೋದಯ ದಿನಾಚರಣೆ ಆಚರಿಸಲಾಯಿತು. ಈ ಸಂದರ್ಭದಲ್ಲಿ ಹಿರಿಯ ನ್ಯಾಯವಾದಿ ಕೋ. ಚನ್ನಬಸಪ್ಪ, ಬೋಧಕ ಡಬ್ಲ್ಯು. ಪಿ. ಕೃಷ್ಣ, ಹಿರಿಯ ಪತ್ರಕರ್ತ ಪಾಟೀಲ್ ಪುಟ್ಟಪ್ಪ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಶ್ರೀನಿವಾಸಯ್ಯ ಉಪಸ್ಥಿತರಿದ್ದರು.

ಈ ಸಂಜೆ
ಗುರುವಾರ, 31 ಜನವರಿ, 2008




ಶೇಷಾದ್ರಿಪುರಂ ಶಿಕ್ಷಣದತ್ತಿಯ ಅಧ್ಯಕ್ಷರಾದ ನಂಜಪ್ಪನವರ 97ನೇ ಹುಟ್ಟುಹಬ್ಬದ ಪ್ರಯುಕ್ತ ಇಂದು ಬೆಳಗ್ಗೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ವತಿಯಿಂದ ಏರ್ಪಡಿಸಲಾಗಿದ್ದ ರಕ್ತದಾನ ಶಿಬಿರದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಎನ್‌ಎಸ್‌ಎಸ್‌ನ ಸುರೇಶ್ವರಯ್ಯ ಮತ್ತು ನಾರಾಯಣನ್‌ರವರು ಸಂಯೋಜನಾಧಿಕಾರಿ ಪ್ರತಾಪ್‌ಲಿಂಗಯ್ಯನವರಿಗೆ ಪ್ರಶಂಸಾ ಪತ್ರವನ್ನು ಪ್ರದಾನ ಮಾಡಲಾಯಿತು. ಗಾಂಧಿಪ್ರಭು, ಮೋಹನ್‌ಕುಮಾರ್, ದೊರೈರಾಜ್, ರಾಜುಚಂದ್ರಶೇಖರ್, ವೂಡೇಪಿ ಕೃಷ್ಣ ಮತ್ತಿತರರು ಇದ್ದರು.



**ಪ್ರಜಾವಾಣಿ** ಮಂಗಳವಾರ 29ನೇ ಜನವರಿ 2008



ಕರ್ನಾಟಕ ಹೈಕೋರ್ಟ್ ನೌಕರರ ಕ್ಷೇಮಾಭಿವೃದ್ಧಿ ಸಂಘವು ಹೈಕೋರ್ಟ್‌ನಲ್ಲಿ ಸೋಮವಾರ ಹಮ್ಮಿಕೊಂಡಿದ್ದ ಸ್ವಯಂಪ್ರೇರಿತ ರಕ್ತದಾನ ಶಿಬಿರವನ್ನು ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಉದ್ಘಾಟಿಸಿದರು. ಕರ್ನಾಟಕ ಸ್ವಯಂ ರಕ್ತದಾನಿಗಳ ಸಂಘದ ಅಧ್ಯಕ್ಷ ರಾಜು ಚಂದ್ರಶೇಖರ, ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ ಉಪಾಧ್ಯಕ್ಷ ವೊಡೆ ಪಿ.ಕೃಷ್ಣ, ಸಂಘದ ಅಧ್ಯಕ್ಷ ಎಂ.ಎನ್.ನಾಡಗೌಡರ್ ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಪ್ರಜಾವಾಣಿ ಚಿತ್ರ

ಸಂಯುಕ್ತ ಕರ್ನಾಟಕ, ಬೆಂಗಳೂರು

29-1-2008



ಸೋಮವಾರ ಹೈಕೋರ್ಟ್‌ನ ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಅವರ ಹುಟ್ಟುಹಬ್ಬ. ಅದರ ಜ್ಞಾಪಕಾರ್ಥ ಹೈಕೋರ್ಟಿನಲ್ಲಿ ರಕ್ತದಾನ ಶಿಬಿರ ನಡೆಯಿತು. ರೆಡ್‌ಕ್ರಾಸ್ ಸೊಸೈಟಿ ಸಹಕಾರದೊಂದಿಗೆ ಏರ್ಪಡಿಸಲಾಗಿದ್ದ ರಕ್ತದಾನ ಆಂದೋಲನವನ್ನು ಮುಖ್ಯ ನ್ಯಾಯಮೂರ್ತಿಯವರು ಉದ್ಘಾಟಿಸಿದರು. ರೆಡ್‌ಕ್ರಾಸ್ ಸೊಸೈಟಿಯ ಉಪಾಧ್ಯಕ್ಷ ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ | ಕರ್ನಾಟಕ ರಾಜಧಾನಿ | 29-1-2008



# ಶೇಷಾದ್ರಿಪುರಂ ಸ್ವತಂತ್ರ ಪದವಿಪೂರ್ವ ಕಾಲೇಜಿನಲ್ಲಿ ಸಡಗರ

ಶೇಷಾದ್ರಿಸ್ವತಂತ್ರ ಪದವಿಪೂರ್ವ ಕಾಲೇಜಿನಲ್ಲಿ ಇತ್ತೀಚೆಗೆ ನಡೆದ 4ನೇ ವಾರ್ಷಿಕೋತ್ಸವದ ಅಂಗವಾಗಿ ವಿದ್ಯಾರ್ಥಿಗಳು ನಕ್ಕು ನಲಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಮಾಸ್ಟರ್ ಹಿರಣ್ಣಯ್ಯ ಅವರು ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತನಾಡುತ್ತಾ, ಭಗವದ್ಗೀತೆಯ ಬೋಧನೆ ಇಳಿ ವಯಸ್ಸಿನವರಿಗಿಂತಲೂ ಜೀವನದ ಪ್ರವೇಶದಲ್ಲಿರುವ ಯುವ ಜನಾಂಗಕ್ಕೆ ಅಗತ್ಯವಾಗಿದೆ. ಇಂದು ವಿದ್ಯಾರ್ಥಿಗಳಿಗೆ ಒಬ್ಬ ಆದರ್ಶ ವ್ಯಕ್ತಿಯನ್ನು ತೋರಿಸುವುದು ಸಾಧ್ಯವಿಲ್ಲದಾಗಿದೆ.

ಸಮಾಜದಲ್ಲಿ ಎರಡು ಬಗೆಯ ಮನುಷ್ಯರಿದ್ದಾರೆ. ಯಾರಿಗಾಗಿ ಬದುಕಬೇಕೋ ಅವರಿಗಾಗಿ ಬದುಕದವರು ಅಂದ ಮೇಲೆ ಅಂಥವರು ಸತ್ತಂತೆ. ಸತ್ತನಂತರವೂ ಬದುಕಿರುವವರು ಕುವೆಂಪ, ಮಾಸ್ತಿ, ವಿವೇಕಾನಂದ ಮುಂತಾದವರು ಎಂದು ಹೇಳಿದರು.

ಕಾರ್ಯಕ್ರಮಕ್ಕೆ ಮತ್ತೊಬ್ಬ ಅತಿಥಿಗಳಾಗಿ ಆಗಮಿಸಿದ್ದ ಎಚ್. ಮಾರಪ್ಪ, ಉಪ ನಿರ್ದೇಶಕರು ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತನಾಡುತ್ತಾ ನಾವು ನೀವುಗಳೆಲ್ಲ ದೇಶ ಸೇವೆ ಮಾಡುವಲ್ಲಿ ಮುಂದಾಗೋಣ ಎಂದು ಕರೆ ನೀಡಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿಗಳಾದ ವೂಡೆ ಪಿ. ಕೃಷ್ಣ ಅವರು ವಿದ್ಯಾರ್ಥಿಗಳನ್ನುದ್ದೇಶಿಸಿ ಹಿತನುಡಿಗಳನ್ನಾಡಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷರಾದ ಕೆ.ಎಂ. ನಂಜಪ್ಪ ಅವರು ಕರ್ಾಕ್ರಮದ ಅಧ್ಯಕ್ಷತೆ ವಹಿಸಿದ್ದರು. ಕಾಲೇಜಿನ ಆಡಳಿತ ಮಂಡಳಿಯ ಅಧ್ಯಕ್ಷ ಎಸ್. ಶೇಷಾನಾರಾಯಣರವರು ಉಪಸ್ಥಿತರಿದ್ದರು. ಕಾಲೇಜಿನ ಪ್ರಾಂಶುಪಾಲರಾದ ಜಯಶ್ರೀ ಜೆ. ಸಿಂಗ್ ಹಾಗೂ ಕಾಲೇಜಿನ ಆಡಳಿತ ಮಂಡಳಿಯ ಸದಸ್ಯರುಗಳಾದ ಡಬ್ಲ್ಯೂ. ಜಿ. ರಾಮಕೃಷ್ಣ, ಎಸ್. ಶ್ರೀನಿವಾಸಲು, ಸರೋಜನಂಜಪ್ಪ ಮತ್ತು ಸಿಬ್ಬಂದಿ ವರ್ಗ, ವಿದ್ಯಾರ್ಥಿಗಳು ಉಪಸ್ಥಿತರಿದ್ದರು.

ಬೆಂಗಳೂರು ವಿಜಯ | ಮಂಗಳವಾರ 29 ಜನವರಿ 2008

# ಭಗವದ್ಗೀತೆ ಯುವ ಜನತೆಗೆ ತಲುಪಲಿ

ಬೆಂಗಳೂರು: ಯುವ ಜನತೆಗೆ ಭಗವದ್ಗೀತೆಯ ಮಹತ್ವ ತಿಳಿಸಬೇಕು ಎಂದು ರಂಗ ಕಲಾವಿದ ಮಾಸ್ಟರ್ ಹಿರಣ್ಣಯ್ಯ ಹೇಳಿದ್ದಾರೆ.

ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನ 4ನೇ ವಾರ್ಷಿಕೋತ್ಸವ ಸಮಾರಂಭದಲ್ಲಿ ಮಾತನಾಡಿದರು.

ಆಧುನಿಕ ಯುಗದಲ್ಲಿ ಯುವ ಜನತೆಗೆ ಉತ್ತಮ ಆದರ್ಶ ಗುರಿ ಹೊಂದಲು ಸಾಧ್ಯವಾಗುತ್ತಿಲ್ಲ. ಎಲ್ಲ ಕ್ಷೇತ್ರಗಳೂ ಮರಳುಗಾಡುಗಳಾಗಿವೆ. ಅದರ ನಡುವೆ ವಿದ್ಯಾರ್ಥಿಗಳು ನಿಂತಿದ್ದಾರೆ. ಅವರನ್ನು ಅದರಿಂದ ಹೊರ ತರಬೇಕಾದ ಅನಿವಾರ್ಯತೆ ಸೃಷ್ಟಿಯಾಗಿದೆ ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಕೆ.ಎಂ. ನಂಜಪ್ಪ ಅಧ್ಯಕ್ಷತೆ ವಹಿಸಿದ್ದರು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ, ಎಚ್. ಮಾರಪ್ಪ, ಎಸ್. ಶೇಷನಾರಾಯಣ, ಪ್ರಾಚಾರ್ಯೆ ಜಯಶ್ರೀ ಜೆ. ಸಿಂಗ್, ಹಾಗೂ ಡಬ್ಲ್ಯು. ಜಿ. ರಾಮಕೃಷ್ಣ, ಎಸ್. ಶ್ರೀನಿವಾಸಲು, ಸರೋಜ ನಂಜಪ್ಪ ಉಪಸ್ಥಿತರಿದ್ದರು.



ಶೇಷಾದ್ರಿಪುರಂ ಸ್ವತಂತ್ರ ಪದವಿಪೂರ್ವ ಕಾಲೇಜಿನ 4ನೇ ವಾರ್ಷಿಕೋತ್ಸವ ಉದ್ಘಾಟನಾ ಸಮಾರಂಭದಲ್ಲಿ ಮಾಸ್ಟರ್ ಹಿರಣ್ಣಯ್ಯ, ಎಚ್. ಮಾರಪ್ಪ, ವೂಡೆ ಪಿ. ಕೃಷ್ಣ, ಡಬ್ಲ್ಯು. ಜಿ. ರಾಮಕೃಷ್ಣ, ಎಸ್. ಶ್ರೀನಿವಾಸಲು, ಸರೋಜ ನಂಜಪ್ಪ ಹಾಜರಿದ್ದರು.

ಕನ್ನಡಪ್ರಭ
ಬೆಂಗಳೂರು
ಮಂಗಳವಾರ, 29 ಜನವರಿ 2008



## ರಕ್ತದಾನ ಶಿಬಿರ

ಹೈಕೋರ್ಟ್ ನೌಕರರ ಸಂಘ ಹಮ್ಮಿಕೊಂಡಿದ್ದ ಸ್ವಯಂಪ್ರೇರಿತ ರಕ್ತದಾನ ಶಿಬಿರವನ್ನು ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಉದ್ಘಾಟಿಸಿದರು. ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಉಪಾಧ್ಯಕ್ಷ ಪ್ರೊ.ಪಿ.ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ನೌಕರರ ಸಂಘದ ಅಧ್ಯಕ್ಷ ನಾಡಗೌಡರ್, ನ್ಯಾ।ಮಂಜುಳಾ ಚೆಲ್ಲೂರ್ ಹಾಜರಿದ್ದರು.




ಕರ್ನಾಟಕ ಉಚ್ಚನ್ಯಾಯಾಲಯ ನೌಕರರ ಕ್ಷೇಮಾಭಿವೃದ್ಧಿ ಸಂಘ ಹಾಗೂ ಕರ್ನಾಟಕ ಸ್ವಯಂ ರಕ್ತದಾನಿಗಳ ಒಕ್ಕೂಟ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಆಶ್ರಯದಲ್ಲಿ ನಗರದ ಹೈಕೋರ್ಟ್ ಆವರಣದಲ್ಲಿ ಹಮ್ಮಿಕೊಂಡಿದ್ದ ಬೃಹತ್ ರಕ್ತದಾನ ಶಿಬಿರದಲ್ಲಿ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್, ದಾನಿಗಳು ನೀಡಿದ ರಕ್ತವನ್ನು ಸಂಸ್ಥೆಯ ಉಪಾಸಭಾಧ್ಯಕ್ಷವೊಡೆ ಪಿ. ಕೃಷ್ಣ ಸ್ವೀಕರಿಸಿದರು. ಒಕ್ಕೂಟದ ಅಧ್ಯಕ್ಷ ರಾಜು ಚಂದ್ರಶೇಖರ್, ವೈದ್ಯಾಧಿಕಾರಿ ಡಾ. ಕಾಶಿನಾಥ್, ಸಂಘದ ಅಧ್ಯಕ್ಷ ಎಂ.ಎನ್.ನಾಡಗೌಡ ಉಪಸ್ಥಿತರಿದ್ದರು.

ಸಂಜೆವಾಣಿ ಸೋಮವಾರ 28 ಜನವರಿ 2008



ರಾಜ್ಯ ಹೈಕೋರ್ಟ್‌ನಲ್ಲಿಂದು ನಡೆದ ರಕ್ತದಾನ ಶಿಬಿರದಲ್ಲಿ ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಅವರು ರಕ್ತದಾನಿಗಳನ್ನು ಅಭಿನಂದಿಸಿದರು. ರೆಡ್‌ಕ್ರಾಸ್ ಸಂಸ್ಥೆಯ ವ್ಯೂಡೆ ಪಿ. ಕೃಷ್ಣ ಹಾಗೂ ರಾಜು ಚಂದ್ರಶೇಖರ್ ಇದ್ದಾರೆ.

## ಸುದ್ದಿ ಚಿತ್ರ



ಗಾಂಧಿ ಶಾಂತಿ ಪ್ರತಿಷ್ಠಾನದ ಆಶ್ರಯದಲ್ಲಿ '21 ರ ದಶಕದಲ್ಲಿ ವಿನೋಭಾ' ಕುರಿತು ಗಾಂಧಿವಾದಿ ಗೌತಮ್ ಬಜಾಜ್ ಅವರೊಂದಿಗೆ ವಿಚಾರ ವಿನಿಮಯ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಪ್ರತಿಷ್ಠಾನದ ಅಧ್ಯಕ್ಷ ವೋಡೇ ಪಿ. ಕೃಷ್ಣ ಮಾಜಿ ಸಚಿವ ಹಾರನಹಳ್ಳಿ ರಾಮಸ್ವಾಮಿ, ಪ್ರೊ. ದಾಸೇಗೌಡ ಹಾಜರಿದ್ದರು.

ಸಂಜೆವಾಣಿ
ಶನಿವಾರ 12 ಜನವರಿ 2008



ಗಾಂಧಿ ಶಾಂತಿ ಪ್ರತಿಷ್ಠಾನ ಏರ್ಪಡಿಸಿದ್ದ ಮಾತೆ ಮಹಾದೇವಿ ತಾಯಿರವರ ಜನ್ಮದಿನ ಹಾಗೂ 21ರ ದಶಕದಲ್ಲಿ ವಿನೋಬಾ ಕುರಿತಂತೆ ನಡೆದ ಕಾರ್ಯಕ್ರಮದಲ್ಲಿ ಗಾಂಧಿವಾದಿ ಗೌತಮ್ ಬಜಾಜ್ ಅವರೊಂದಿಗೆ ವಿಚಾರ ವಿನಿಮಯ ಕಾರ್ಯಕ್ರಮ ನಡೆಸಲಾಯಿತು. ಚಿತ್ರದಲ್ಲಿ ವೂಡೇ ಪಿ.ಕೃಷ್ಣ, ಮಾಜಿ ಸಚಿವ ಹಾರ್ನಳ್ಳಿ ರಾಮಸ್ವಾಮಿ, ಕಾರ್ಯದರ್ಶಿ ಪ್ರೊ. ಹೆಚ್.ಆರ್. ದಾಸೇಗೌಡ ಅವರನ್ನು ಕಾಣಬಹುದು.



ಸಂಯುಕ್ತ ಕರ್ನಾಟಕ ಬೆಂಗಳೂರು
11-1-2008



*ಬೆಂಗಳೂರಿನ ಗಾಂಧಿಭವನದಲ್ಲಿ ಸ್ವಾತಂತ್ರ್ಯ ಸೇನಾನಿ ಮಹದೇವಿ ತಾಯಿ ಹುಟ್ಟುಹಬ್ಬದಂಗವಾಗಿ ಆಯೋಜಿಸಿದ್ದ '೨೧ನೇ ಶತಮಾನದಲ್ಲಿ ವಿನೋಬಾ ವಿಚಾರ' ಕುರಿತು ಚಿಂತಕ ಗೌತಮಿ ಬಜಾಜ್ ವಿಚಾರ ಮಂಡಿಸಿದರು. ಈ ಸಂದರ್ಭದಲ್ಲಿ ಲೋಕಶಿಕ್ಷಣ ಟ್ರಸ್ಟ್ ಅಧ್ಯಕ್ಷ ಹಾರನಹಳ್ಳಿ ರಾಮಸ್ವಾಮಿ, ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಪ್ರೊ. ಎಚ್.ಆರ್. ದಾಸೇಗೌಡ ಮತ್ತಿತರರು ಉಪಸ್ಥಿತರಿದ್ದರು.*

# 'ಗಾಂಧಿ ವಿಚಾರಧಾರೆಗೆ ವಿನೋಬಾ ವಿಸ್ತರಣೆ'

ಬೆಂಗಳೂರು, ಜ. 10– ಮಹಾತ್ಮ ಗಾಂಧಿಯವರ ವಿಚಾರಧಾರೆಗಳಿಗೆ ವಿನೋಬಾರವರು ಮತ್ತಷ್ಟು ವಿಸ್ತರಣೆ ಕೊಟ್ಟು ಅದನ್ನು ಆಚರಣೆಗೆ ತರುವಲ್ಲಿ ಪ್ರಮುಖ ಪಾತ್ರ ವಹಿಸಿದರು ಎಂದು ಚಿಂತಕರಾದ ಗೌತಮಿ ಬಜಾಜ್ ಅಭಿಪ್ರಾಯಪಟ್ಟರು.

ಗಾಂಧಿ ಭವನದಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಸ್ಥೆಗಳು ಸ್ವಾತಂತ್ರ್ಯ ಸೇನಾನಿ ಮಹದೇವಿ ತಾಯಿ ಹುಟ್ಟುಹಬ್ಬದಂಗವಾಗಿ ಆಯೋಜಿಸಿದ್ದ '೨೧ನೇ ಶತಮಾನದಲ್ಲಿ ವಿನೋಬಾ ವಿಚಾರ' ಕುರಿತು ಮಾತನಾಡಿದ ಅವರು, ಗಾಂಧೀಜಿಯವರ ಅಹಿಂಸೆಯ ವಿಚಾರಧಾರೆಯಿಂದ ದೊರಕಿದ ಸ್ವಾತಂತ್ರ್ಯ ಪ್ರಮುಖವಾದುದಲ್ಲ, ಅದು ಪ್ರಾಸಂಗಿಕ. ಅವರ ನಿಜವಾದ ಕೊಡುಗೆ ವ್ಯಕ್ತಿಗತ ಜೀವನ ಮೌಲ್ಯಗಳನ್ನು ಸಾಮಾಜಿಕ, ದೈನಂದಿನ ಜೀವನಮೌಲ್ಯಗಳಾಗಿ ಪರಿವರ್ತಿಸುವುದು ಎಂದು ಹೇಳಿದರು.

ಗಾಂಧೀಜಿಯವರ ಜೀವನ ಮೌಲ್ಯಗಳು ಅಹಿಂಸೆ, ಕರುಣೆ, ದಯೆ ಮುಂತಾದವು ವ್ಯಕ್ತಿಗತ ಜೀವನದಲ್ಲಿ ಮಾತ್ರ ಗೋಚರವಾಗುತ್ತಿತ್ತು. ಗಾಂಧೀಜಿಯವರ ಪ್ರಯೋಗದಿಂದ ಈ ಮೌಲ್ಯಗಳು ಸಾಮಾಜಿಕ ಮೌಲ್ಯಗಳಾಗಿ ಪ್ರತಿಷ್ಠೆ ಹೊಂದಿದವು ಎಂದು ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಲೋಕಶಿಕ್ಷಣ ಟ್ರಸ್ಟ್ ಅಧ್ಯಕ್ಷ ಹಾರನಹಳ್ಳಿ ರಾಮಸ್ವಾಮಿಯವರು ಸರ್ವೋದಯ ವಿಚಾರಧಾರೆಯನ್ನು ವಿಸ್ತಾರವಾಗಿ ವಿವರಿಸಿದರು. ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಪ್ರೊ. ಎಚ್.ಆರ್. ದಾಸೇಗೌಡ ಸ್ವಾಗತಿಸಿದರು. ಗಾಂಧಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ. ಕೃಷ್ಣ ಮಹಾತ್ಮ ಗಾಂಧೀಜಿಯವರ ಮೊಮ್ಮಗಳಾದ ಸುಮಿತ್ರ ಗಾಂಧಿ ಕುಲಕರ್ಣಿ ಉಪಸ್ಥಿತರಿದ್ದರು.

ಪ್ರಜಾವಾಣಿ

ಶುಕ್ರವಾರ 11ನೇ ಜನವರಿ 2008



ಗಾಂಧಿ ಶಾಂತಿ ಪ್ರತಿಷ್ಠಾನ ಹಾಗೂ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ಗುರುವಾರ ಬೆಂಗಳೂರಿನಲ್ಲಿ ಹಮ್ಮಿಕೊಂಡಿದ್ದ '21ರ ದಶಕದಲ್ಲಿ ವಿನೋಬಾ' ಕಾರ್ಯಕ್ರಮದಲ್ಲಿ ಪ್ರತಿಷ್ಠಾನದ ಕಾರ್ಯದರ್ಶಿ ಪ್ರೊ. ಎಚ್.ಆರ್.ದಾಸೇಗೌಡ, ಮಾಜಿ ಸಚಿವ ಹಾರನಹಳ್ಳಿ ರಾಮಸ್ವಾಮಿ, ಗಾಂಧಿವಾದಿ ಗೌತಮ್ ಬಜಾಜ್ ಮತ್ತು ಪ್ರತಿಷ್ಠಾನದ ಅಧ್ಯಕ್ಷ ವೂಡೇ.ಪಿ.ಕೃಷ್ಣ ಪಾಲ್ಗೊಂಡಿದ್ದರು.

# ಗಾಂಧಿ ಶಾಂತಿ ಪ್ರತಿಷ್ಠಾನ - ವೂಡೆ ಪ್ರತಿಷ್ಠಾನ

# ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಹೊ.ಶ್ರೀನಿವಾಸಯ್ಯನವರಿಗೆ ಪ್ರಶಸ್ತಿ ಪ್ರದಾನ

## ಅಪ್ಪಟಗಾಂಧಿ ವಾದಿ, ಅಪಾರ ಸತ್ಯವಂತ ಡಬ್ಲ್ಯು.ಎಚ್.ಹನುಮಂತಪ್ಪನವರ ಸ್ಮರಣೆ

ಗಾಂಧಿ ಶಾಂತಿ ಪ್ರತಿಷ್ಠಾನ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ವೂಡೆ ಪ್ರತಿಷ್ಠಾನಗಳ ಸಂಯುಕ್ತ ಆಶ್ರಯದಲ್ಲಿ ೨೪-೧೨-೨೦೦೭ರ ಸಂಜೆ ಗಾಂಧಿಭವನ



ಕೀ|| ಶೇ|| ಡಬ್ಲ್ಯು.ಎಚ್.ಹನುಮಂತಪ್ಪ

ದಲ್ಲಿ ನಡೆದ ಸರಳ ಸುಂದರ ಸಮಾರಂಭದಲ್ಲಿ ಸ್ವಾತಂತ್ರ್ಯ ಯೋಧ ಹಾಗೂ ಪ್ರಕೃತಿ ಚಿಕಿತ್ಸೆಯ ಪ್ರತಿಪಾದಕ ಹೊ.ಶ್ರೀನಿವಾಸಯ್ಯ ಅವರನ್ನು ಆತ್ಮೀಯವಾಗಿ ಸನ್ಮಾನಿಸಲಾಯಿತು. ಗಾಂಧಿ ಶಾಂತಿ ಪ್ರತಿಷ್ಠಾನದ ಖಜಾಂಚಿ ಹಾಗೂ ವಿದ್ಯಾ ಇಲಾಖೆಯ ನಿ.ಜಂಟಿ ನಿರ್ದೇಶಕ ಎಚ್.ರಾಮಪ್ಪನವರು ಡಬ್ಲ್ಯು.ಎಚ್. ಹನುಮಂತಪ್ಪನವರ ಜೀವನ ಮತ್ತು ಸೇವಾ ಕಾರ್ಯಗಳ ಬಗೆಗೆ ವಿವರಿಸಿದರು. ಪ್ರೊ.ಸಿ.ಕೆ.ಎನ್.ರಾಜ ಅವರು ಡಬ್ಲ್ಯು.ಎಚ್.ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದನ್ವಯ ''ಸಂವಿಧಾನ ಮತ್ತು ಸಮ್ಮಿಶ್ರ ಸರ್ಕಾರಗಳು''- ಕುರಿತು ಮಾತನಾಡಿದರು.

ಡಾ.ಎಚ್.ಆರ್.ದಾಸೇಗೌಡ ಅವರು ನಿರೂಪಿಸಿದ ಈ ಕಾರ್ಯಕ್ರಮ ಮಹಾಲಕ್ಷ್ಮೀ ಅವರ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ.ಕೃಷ್ಣ ಅವರು ಸ್ವಾಗತ ಭಾಷಣ ಮಾಡುತ್ತಾ ''ಇಪ್ಪತ್ತು ವರ್ಷಗಳಿಂದ ಈ ದತ್ತಿ ಉಪನ್ಯಾಸ ನಡೆದುಕೊಂಡು ಬರುತ್ತಿದೆ. ನ್ಯಾಯಮೂರ್ತಿ ವಿ.ಆರ್.ಕೃಷ್ಣಯ್ಯರ್, ಡಾ|| ಡಿ.ಎಂ.ನಂಜುಂಡಪ್ಪ ಮೊದಲಾದವರೆಲ್ಲ ಉಪನ್ಯಾಸ ನೀಡಿದ್ದಾರೆ. ಈ ಕಾರ್ಯಕ್ರಮದ ಮುಖ್ಯ ರೂವಾರಿ: Brain Behind this is H.R.Dasegowda" ಎಂದು ಹೇಳಿದರು.

ಎಚ್.ರಾಮಪ್ಪನವರು ತಮ್ಮ ಭಾಷಣದಲ್ಲಿ ''ಅನೇಕ ಮನೆಗಳಿಗೆ ಬೆಳಕು ನೀಡಿದ ಮಹಾನ್ ಜ್ಯೋತಿ ಡಬ್ಲ್ಯು.ಎಚ್.ಹನುಮಂತಪ್ಪ. ಹಿರಿಯೂರು ಮತ್ತು ಚಳ್ಳಕೆರೆ ಮಧ್ಯೆ ಬರುವ ವೂಡೆ ಗ್ರಾಮದ ಅವರು ಇಂದು ಬದುಕಿದ್ದಿದ್ದರೆ ೧೨೭ ವರ್ಷದವರಾಗಿರುತ್ತಿದ್ದರು. ಎಸ್.ಎಸ್.ಎಲ್.ಸಿ.ವರೆಗೆ ಮಾತ್ರ ಓದಿದ್ದರು. ಮಹಾತ್ಮ ಗಾಂಧಿಯವರ ಬಗೆಗೆ ತುಂಬಾ ಅಭಿಮಾನ ಹೊಂದಿದ್ದ ಅವರು ಮೈಸೂರಿನಲ್ಲಿ ಖುದ್ದಾಗಿ ಭೇಟಿ ಮಾಡಿ, ಮಾತುಕತೆ ನಡೆಸಿ, ಆಶೀರ್ವಾದ ಪಡೆದರು. ತಮ್ಮ ಜೀವಮಾನವಿಡೀ ಗಾಂಧಿ ತತ್ವ ಪ್ರತಿಪಾದಿಸಿದ ಅವರು ಭಾರತ ಬಿಟ್ಟು ತೊಲಗಿ ಚಳವಳಿಯಲ್ಲೂ ಭಾಗಿಯಾಗಿದ್ದರು. ಗಾಂಧೀಜಿಯವರು ಆಗಾಖಾನ್ ಅರಮನೆಯಲ್ಲಿದ್ದಾಗ ಭೇಟಿ ನೀಡಿ ಆರೋಗ್ಯ ವಿಚಾರಿಸಿದ್ದರು. ಬೆಂಗಳೂರು ಮುನಿಸಿಪಾಲಿಟಿಗೆ ಎರಡು ಅವಧಿ ಸದಸ್ಯರಾಗಿದ್ದರು, ಒಮ್ಮೆ ಅಧ್ಯಕ್ಷರಾಗಿದ್ದರು. ಅವರು ಮುನಿಸಿಪಾಲಿಟಿ ಅಧ್ಯಕ್ಷರಾಗಿದ್ದಾಗ, ವಿಧಿಸಬಹುದೇ ಎಂದು ಪ್ರಶ್ನಿಸಿದೊಡ್ಡ ಹೋರಾಟ ನಡೆಸಿ ತೆರಿಗೆ ಪ್ರಸ್ತಾಪ ವಾಪಸ್ ಪಡೆಯುವಂತೆ ಮಾಡಿದರು. ಬಡ ಮಕ್ಕಳಿಗಾಗಿ ನರ್ಸರಿ ಹಾಗೂ ಪ್ರೌಢಶಾಲೆಗಳನ್ನು ಆರಂಭಿಸಿದರು. ಸಣ್ಣ ಸಣ್ಣ ಆಸ್ಪತ್ರೆಗಳನ್ನು ಸ್ಥಾಪಿಸಿದರು. ಶಿವಾಜಿನಗರದಲ್ಲಿ ಹೆಣ್ಣು ಮಕ್ಕಳಿಗಾಗಿ ತಮಿಳು ಶಾಲೆ ಆರಂಭಿಸಿದರು. ಕೊರಟಗೆರೆ ತಾಲ್ಲೂಕು ಹುಲಿಕುಂಟೆ ಗ್ರಾಮದಲ್ಲೂ ಒಂದು ಶಾಲೆ ಸ್ಥಾಪಿಸಿದ್ದಾರೆ. ದೇಶದ ದುಸ್ಥಿತಿಗೆ ನಮ್ಮಲ್ಲಿರುವ ಸೇವಾ ಮನೋಭಾವದ ಕೊರತೆಯೇ ಕಾರಣ ಎನ್ನುತ್ತಿದ್ದ ಈ ಮಹಾನುಭಾವರು ೩೦-೧೨-೭೭ರಂದು ತಮ್ಮ ೯೨ನೇ ವಯಸ್ಸಿನಲ್ಲಿ ನಿಧನರಾದರು. ಅವರ ಮಗ ಜೂನಿಯರ್ ಹನುಮಂತಪ್ಪನವರೂ ತಂದೆಯ ಸೇವಾ ಕಾರ್ಯಗಳನ್ನು ಮುಂದುವರೆಸಿದರು'' ಎಂದು ಹೇಳಿದರು.

''ಸಂವಿಧಾನ ಮತ್ತು ಸಮ್ಮಿಶ್ರ ಸರ್ಕಾರಗಳು'' ಈ ವಿಷಯ ಕುರಿತು ದತ್ತಿ ಉಪನ್ಯಾಸ ನೀಡಿದ ಪ್ರೊ.ಸಿ.ಕೆ.ಎನ್.ರಾಜಾ ಅವರು ''೧೯೫೨ ರಿಂದ ೧೯೬೭ರವರೆಗೆ ಭಾರತದಲ್ಲಿ ಕಾಂಗ್ರೆಸ್ಸೇ ಪ್ರಧಾನ ಪಕ್ಷವಾಗಿದ್ದಿತು. ೧೯೬೭ರಿಂದ ಕಾಂಗ್ರೆಸ್‌ನ ಪ್ರಾಧಾನ್ಯ ಇಳಿಮುಖವಾಗುತ್ತಾ ಹೋಗಿ, ೧೯೭೭ ರಿಂದ ಸಮ್ಮಿಶ್ರ ಸರ್ಕಾರ ಯುಗ ಆರಂಭವಾಯಿತು. ಕೇಂದ್ರದಲ್ಲಿ ಮತ್ತು ಹಲವು ರಾಜ್ಯಗಳಲ್ಲಿ ಸಮ್ಮಿಶ್ರ ಸರ್ಕಾರಗಳು ಅಸ್ತಿತ್ವಕ್ಕೆ ಬಂದವಾದರೂ, ಈ ಸರ್ಕಾರಗಳಲ್ಲಿದ್ದ ಪಕ್ಷಗಳ ಪರಸ್ಪರ ನಡವಳಿಕೆ ನೋಡಿದರೆ, ತಾಳಮೇಳವಿಲ್ಲದ ವಾದ್ಯಗೋಷ್ಠಿಯಂತೆ ಗೋಚರವಾಗುತ್ತಿತ್ತು. ಈ ಸಮ್ಮಿಶ್ರ ಸರ್ಕಾರಗಳಲ್ಲಿ ಹೊರನೋಟಕ್ಕೆ ಭದ್ರತೆ ಕಂಡರೂ, ಒಳಹೊಕ್ಕು ನೋಡಿದಾಗ, ಛಿದ್ರತೆ ಕಂಡು ಬರುತ್ತಿತ್ತು. ಜನರಿಗೆ ಒಳ್ಳೆಯದು ಮಾಡುವುದಕ್ಕಾಗಿ ಸಮ್ಮಿಶ್ರ ಸರ್ಕಾರ ಮಾಡುತ್ತಿದ್ದೇವೆ ಎಂದು ಹೇಳುವುದೆಲ್ಲಾ ಬರೀ ಸುಳ್ಳು, ಅಧಿಕಾರ ಹಿಡಿಯುವುದೇ ಪರಸ್ಪರ ವಿರೋಧ ಮನೋಭಾವದ ಈ ನಾಯಕರ ಗುರಿ ಆಗಿರುತ್ತದೆ. ಚುನಾವಣೆಗೆ ಮುಂಚೆಯೇ ಹೊಂದಾಣಿಕೆ ಮಾಡಿಕೊಂಡಿದ್ದರೆ, ಅದೊಂದು ರೀತಿ. ಚುನಾವಣಾ ನಂತರ ಕೇವಲ ಅಧಿಕಾರಕ್ಕಾಗಿ ಹೊಂದಾಣಿಕೆ ಮಾಡಿಕೊಳ್ಳುವುದು ಮತದಾರರಿಗೆ ಮಾಡಿದ ವಂಚನೆಯಲ್ಲವೇ?'' ಎಂದು ಪ್ರಶ್ನಿಸಿದರು.

ವೂಡೆ ಪ್ರತಿಷ್ಠಾನದ ಪ್ರಶಸ್ತಿ ಸ್ವೀಕರಿಸಿದ ಗಾಂಧಿವಾದಿ ಹೊ.ಶ್ರೀನಿವಾಸಯ್ಯನವರು ಸಿದ್ಧವನಹಳ್ಳಿ ಕೃಷ್ಣಶರ್ಮರ ಮೂಲಕ ಪರಿಚಯವಾದ ಡಬ್ಲ್ಯು ಎಚ್.ಹನುಮಂತಪ್ಪನವರು ಆ ನಂತರ ತಮಗೂ ಆತ್ಮೀಯರಾಗಿದ್ದುದನ್ನು ಸ್ಮರಿಸಿಕೊಂಡರು.

ಅಧ್ಯಕ್ಷತೆ ವಹಿಸಿದ್ದ ಪ್ರೊ.ರವಿವರ್ಮಕುಮಾರ್ ಅವರು ''ಈಗ ರಾಷ್ಟ್ರಪತಿ ಆಡಳಿತ ಕರ್ನಾಟಕದಲ್ಲಿ ಜಾರಿಯಲ್ಲಿದ್ದು ಇನ್ನು ಎರಡು ವರ್ಷಗಳ ಕಾಲ ಹೀಗೇ ಇರಲಿ, ಚುನಾಯಿತ ಸರ್ಕಾರವೇ ಬೇಡ, ಎಂದು ಬಹಳಷ್ಟು ಜನ ಮಾತನಾಡಿಕೊಳ್ಳುತ್ತಿದ್ದಾರೆ, ಸಮ್ಮಿಶ್ರ ಸರ್ಕಾರಗಳಲ್ಲಿನ ಪಕ್ಷಗಳ ಪರಸ್ಪರ ಕಿತ್ತಾಟದಿಂದ ಜನ



ಗಾಂಧಿವಾದಿ ಹೊ.ಶ್ರೀನಿವಾಸಯ್ಯ

ಅಷ್ಟೊಂದು ಬೇಸತ್ತಿದ್ದಾರೆ'' ಎಂದು ವ್ಯಂಗ್ಯ ವಾಡಿದರು. ''ನಮ್ಮ ದೇಶದಲ್ಲಿ ಆರು ರಾಷ್ಟ್ರೀಯ ಪಕ್ಷಗಳು, ೨೫ ಪ್ರಾದೇಶಿಕ ಪಕ್ಷಗಳು, ೮೨೭ ಸಣ್ಣ ಸಣ್ಣ ನೋಂದಾಯಿತ ಪಕ್ಷಗಳಿದ್ದು, ರಾಷ್ಟ್ರೀಯ ಪಕ್ಷಗಳು ಒಂದು ಜಾತಿಯ ಕೈಯಲ್ಲೂ, ಪ್ರಾದೇಶಿಕ ಪಕ್ಷಗಳು ಬೇರೊಂದು ಜಾತಿಯ ಕೈಯಲ್ಲೂ ಇವೆ. ಯಾವ ಪಕ್ಷದಲ್ಲೂ ಆಂತರಿಕ, ಅಭಿವ್ಯಕ್ತಿ ಸ್ವಾತಂತ್ರ್ಯ ಇಲ್ಲ, ಎಲ್ಲಿಯವರೆಗೆ ಜಾತಿ, ಧರ್ಮದ ಆಧಾರದ ಮೇಲೆ ಆಡಳಿತ ನಡೆಸುತ್ತೇವೆಯೋ ಅಲ್ಲಿಯವರೆಗೆ ಸಮ್ಮಿಶ್ರ ಸರ್ಕಾರಗಳಿರುತ್ತವೆ'' ಎಂದು ಹೇಳಿದರು.

ಡಬ್ಲ್ಯು.ಎಚ್.ದೇವಕುಮಾರ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು. ಸ್ವಾತಂತ್ರ್ಯ ಸೇನಾನಿ ಎಚ್.ಎಸ್.ದೊರೆಸ್ವಾಮಿ ಮೊದಲಾದವರು ಉಪಸ್ಥಿತರಿದ್ದರು.

ಬೆಂಗಳೂರು ವಿಜಯ | ಬುಧವಾರ 9 ಜನವರಿ 2008



ಅಖಿಲ ಭಾರತ ಬ್ರಹ್ಮ ಸಮಾಜದ 117ನೇ ವಾರ್ಷಿಕ ಅಧಿವೇಶನದ ಉದ್ಘಾಟನಾ ಸಮಾರಂಭದಲ್ಲಿ ಬೆಂಗಳೂರು ವಿವಿಯ ಗಾಂಧಿ ಅಧ್ಯಯನ ಕೇಂದ್ರದ ನಿರ್ದೇಶಕ ಡಾ. ಜೀವನ್ ಕುಮಾರ್, ಡಾ. ಅಶೋಕ್ ಗುರುದಾಸ್, ಶಿಕ್ಷಣ ತಜ್ಞ ವೂಡೇ ಪಿ. ಕೃಷ್ಣ ಭಾಗವಹಿಸಿದ್ದರು.

ಉದಯವಾಣಿ ಜನವರಿ 8, 2008

# ಉದ್ಘಾಟನೆ



ಅಖಿಲ ಭಾರತ ಬ್ರಹ್ಮ ಸಮಾಜದ 117ನೇ ವಾರ್ಷಿಕ ಅಧಿವೇಶನವನ್ನು ಇತ್ತೀಚೆಗೆ ಬೆಂಗಳೂರು ವಿಶ್ವವಿದ್ಯಾನಿಲಯದ ಗಾಂಧೀ ಅಧ್ಯಯನ ಕೇಂದ್ರದ ನಿರ್ದೇಶಕ ಡಾ। ಡಿ. ಜೀವನ್ ಕುಮಾರ್ ಉದ್ಘಾಟಿಸಿದರು. ಬೆಂಗಳೂರು ಬ್ರಹ್ಮ ಸಮಾಜದ ಅಧ್ಯಕ್ಷ ಡಾ। ಅಶೋಕ ಗುರುದಾಸ್ ಹಾಗೂ ಶಿಕ್ಷಣ ತಜ್ಞ ವೂಡೇ ಪಿ. ಕೃಷ್ಣ ಉಪಸ್ಥಿತರಿದ್ದರು.

ಕನ್ನಡಪ್ರಭ, ಶನಿವಾರ, 5 ಜನವರಿ 2008

## ಸನ್ಮಾನ...

ಗಾಂಧಿ ಶಾಂತಿ ಪ್ರತಿಷ್ಠಾನ ಏರ್ಪಡಿಸಿದ್ದ ಉಪನ್ಯಾಸದಲ್ಲಿ ಡಾ. ಹೋ. ಶ್ರೀನಿವಾಸಯ್ಯ ಅವರಿಗೆ ವೂಡೇ ಪ್ರತಿಷ್ಠಾನ ಪ್ರಶಸ್ತಿ ನೀಡಲಾಯಿತು. ವೂಡೇ ಪಿ. ಕೃಷ್ಣ, ರವಿವರ್ಮಕುಮಾರ್, ದಾಸೇಗೌಡ, ರಾಮಪ್ಪ, ದೇವ್‌ಕುಮಾರ್ ಇದ್ದರು.



ಈ ಸಂಜೆ | ಮಂಗಳವಾರ, 6 ಜನವರಿ, 20



ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನ ವಾರ್ಷಿಕೋತ್ಸವದಲ್ಲಿ ಎಂ.ಅಬ್ದುಲ್ ರೆಹಮಾನ್ ಪಾಷಾ, ಸರೋಜಾನಂಜಪ್ಪ, ವೂಡೇ ಪಿ.ಕೃಷ್ಣ, ಡಬ್ಲ್ಯು.ಜಿ.ರಾಮಕೃಷ್ಣ, ಎಸ್. ವೀರಭದ್ರಯ್ಯ, ಎನ್.ಆರ್.ಪಂಡಿತಾರಾಧ್ಯ, ಪ್ರೊ.ಬೈರೇಗೌಡ ಉಪಸ್ಥಿತರಿದ್ದರು.

# ಶೇಷಾದ್ರಿಪುರಂ ಸಂಸ್ಥೆಗೆ ಮೆಚ್ಚುಗೆ

ಬೆಂಗಳೂರು, ಜ.6-ದೇಶದ ಸಂಸ್ಕೃತಿಯನ್ನು ಎತ್ತಿ ಹಿಡಿಯುವ ಕಾರ್ಯವನ್ನು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಯಶಸ್ವಿಯಾಗಿ ನಿರ್ವಹಿಸಿದೆ ಎಂದು ಶಿಕ್ಷಣ ತಜ್ಞ ಅಬ್ದುಲ್ ರೆಹಮಾನ್ ಪಾಷ ಹೇಳಿದ್ದಾರೆ.

ಶೇಷಾದ್ರಿಪುರಂ ಸಂಜೆ ಪದವಿಪೂರ್ವ ಕಾಲೇಜಿನ ಕುವೆಂಪು ಬಯಲು ರಂಗಮಂದಿರದಲ್ಲಿ ಆಯೋಜಿಸಿದ್ದ ವಾರ್ಷಿಕೋತ್ಸವ ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳನ್ನುದ್ದೇಶಿಸಿ ಅವರು ಮಾತನಾಡಿದರು.

ಸಮಾಜಕ್ಕೆ ಸುಸಂಸ್ಕೃತರನ್ನು ಒದಗಿಸುವಲ್ಲಿ ವಿಶಿಷ್ಟ ಸ್ಥಾನವನ್ನು ಈ ಸಂಸ್ಥೆ ಪಡೆದುಕೊಂಡಿದ್ದು, ಈ ಸಂಸ್ಥೆಯಲ್ಲಿ ವ್ಯಾಸಂಗ ಮಾಡಿ ಜೀವನವನ್ನು ಉನ್ನತೀಕರಿಸಿಕೊಳ್ಳಬೇಕು ಎಂದು ಕಿವಿಮಾತು ಹೇಳಿದರು. ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ.ಕೃಷ್ಣ ಮಾತನಾಡಿ, ಎಲ್ಲ ಸಮೂಹ ಸಂಸ್ಥೆಗಳಲ್ಲಿ ಶಿಸ್ತುಬದ್ಧ ಸಂಸ್ಥೆ ಎಂದರೆ ಸಂಜೆ ಪದವಿ ಪೂರ್ವ ಕಾಲೇಜು ಎಂದು ಶ್ಲಾಘಿಸಿದರು.

ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಭಾಗವಹಿಸಿದ್ದ ಕಾರ್ಯಕ್ರಮದಲ್ಲಿ ಆಡಳಿತ ಸಲಹಾ ಪರಿಷತ್ತಿನ ಅಧ್ಯಕ್ಷ ಎನ್.ವೀರಭದ್ರಯ್ಯ ಮಾತನಾಡಿ, ಸಮಾಜದ ಎಲ್ಲ ವರ್ಗದವರಿಗೂ ಉತ್ತಮ ಗುಣಮಟ್ಟದ ಶಿಕ್ಷಣ ಒದಗಿಸುವುದು ಈ ಸಂಸ್ಥೆಯ ಉದ್ದೇಶವಾಗಿದೆ ಎಂದರು. ಸಂಸ್ಥೆಯ ಸಹಾಯಕ ಕಾರ್ಯದರ್ಶಿ ಸರೋಜಮ್ಮ ನಂಜಪ್ಪ ಹಾಗೂ ಧರ್ಮದರ್ಶಿ ಡಬ್ಲ್ಯು.ಜಿ.ರಾಮಕೃಷ್ಣ ಸಮಾರಂಭದಲ್ಲಿ ಉಪಸ್ಥಿತರಿದ್ದರು.



ಗಾಂಧಿ ಪ್ರತಿಷ್ಠಾನ ಏರ್ಪಡಿಸಿದ್ದ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಗಾಂಧಿ ವಾದಿ ಡಾ. ಹೋ. ಶ್ರೀನಿವಾಸಯ್ಯ ಅವರಿಗೆ ವೂಡೇ ಪ್ರತಿಷ್ಠಾನ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಪ್ರೊ. ರಾಜ, ಪ್ರೊ. ರವಿವರ್ಮಾಕುಮಾರ್, ಶಿಕ್ಷಣ ತಜ್ಞ ಪ್ರೊ. ದಾಸೇಗೌಡ, ರಾಮಪ್ಪ ಉಪಸ್ಥಿತರಿದ್ದರು.

ಕನ್ನಡಪ್ರಭ, ಬೆಂಗಳೂರು
ಶುಕ್ರವಾರ, 1 ಫೆಬ್ರವರಿ 2008

## ರಕ್ತದಾನ ಶಿಬಿರ

ಮಾಜಿ ಮೇಯರ್ ಕೆ.ಎಂ.ನಂಜಪ್ಪ ಅವರ 97ನೇ ಹುಟ್ಟುಹಬ್ಬದ ಅಂಗವಾಗಿ ಲಯನ್ಸ್ ಸಂಸ್ಥೆ ಮಾಧವನಗರ, ಭಾರತೀಯ ರೆಡ್ ಕ್ರಾಸ್ ಜಂಟಿಯಾಗಿ ಸ್ವಯಂ ರಕ್ತದಾನ ಶಿಬಿರ ಏರ್ಪಡಿಸಿತ್ತು. ಡಾ.ಎಸ್.ಎಂ. ಸುರೇಶ್ವರಯ್ಯ, ಪಿ.ಕೃಷ್ಣ; ರಾಜು, ಚಂದ್ರಶೇಖರ್, ಶೇಷಾದ್ರಿಪುರ ಕಾಲೇಜು ವಿದ್ಯಾರ್ಥಿಗಳು ಇದ್ದರು.



ಈ ಸಂಜೆ
ಮಂಗಳವಾರ 01 ಜನವರಿ 2008



ಪದವಿ ಪೂರ್ವ ಶಿಕ್ಷಣ ಇಲಾಖೆ ಸಹಾಯಕ ನಿರ್ದೇಶಕ ಟಿ.ಎಸ್.ತುಳಸೀಕುಮಾರ್ ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನ ಪ್ರಸಕ್ತ ಶೈಕ್ಷಣಿಕ ವರ್ಷದ ಕಾಲೇಜು ವಾರ್ಷಿಕೋತ್ಸವಕ್ಕೆ ಚಾಲನೆ ನೀಡಿದರು. ಕೆ.ಎಂ.ನಂಜಪ್ಪ, ಡಬ್ಲ್ಯು.ಪಿ.ಕೃಷ್ಣ, ಎಸ್.ವೀರಭದ್ರಯ್ಯ, ಸರೋಜಾ ನಂಜಪ್ಪ, ಆರ್.ಶ್ರೀನಿವಾಸ್ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ ಕರ್ನಾಟಕ ರಾಜಧಾನಿ 1-1-2008




ಲಯನ್ಸ್ ಕ್ಲಬ್ ಬೆಂಗಳೂರು ಇತ್ತೀಚೆಗೆ ಮಾಧವನಗರ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಸಂಯುಕ್ತ ಆಶ್ರಯದಲ್ಲಿ ಏರ್ಪಡಿಸಿದ್ದ ಸನ್ಮಾನ ಸಮಾರಂಭದಲ್ಲಿ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ, ಮೂತ್ರರೋಗ ತಜ್ಞ ಡಾ. ಎಚ್.ಕೆ. ನಾಗರಾಜ್‌ರನ್ನು ಸನ್ಮಾನಿಸಿತು. ಮಾಜಿ ಮಹಾಪೌರ ಕೆ.ಎಂ. ನಂಜಪ್ಪ, ಶಿಕ್ಷಣ ತಜ್ಞ ಡಬ್ಲ್ಯು.ಪಿ. ಕೃಷ್ಣ, ರಾಜ್ಯ ರೆಡ್‌ಕ್ರಾಸ್ ಸಂಸ್ಥೆಯ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಲಯನ್ಸ್ ಸಂಸ್ಥೆ ಅಧ್ಯಕ್ಷ ನಂಜುಂಡಪ್ಪ, ಡಬ್ಲ್ಯು. ಜಿ. ರಾಮಕೃಷ್ಣ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

1-1-2008




ಅಖಿಲ ಭಾರತ ಬ್ರಹ್ಮ ಸಮಾಜದ ೧೧೭ನೇ ವಾರ್ಷಿಕ ಅಧಿವೇಶನ ಬೆಂಗಳೂರಿನಲ್ಲಿ ನಡೆಯಿತು. ಬೆಂಗಳೂರು ವಿವಿ ಗಾಂಧಿ ಅಧ್ಯಯನ ಕೇಂದ್ರದ ನಿರ್ದೇಶಕ ಡಾ. ಬಿ. ಜೀವನ್‌ಕುಮಾರ್ ಉದ್ಘಾಟಿಸಿದರು. ನಗರದ ಬ್ರಹ್ಮ ಸಮಾಜದ ಅಧ್ಯಕ್ಷ ಡಾ. ಅಶೋಕ್ ಗುರುದಾಸ್, ಶಿಕ್ಷಣ ತಜ್ಞ ವೂಡೆ ಪಿ. ಕೃಷ್ಣ ಇತರರು ಉಪಸ್ಥಿತರಿದ್ದರು.